CPMG / KA / BG-GPO/13/2003-2005

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೨, ೨೦೦೩ (ಆಶ್ವಯುಜ ೧೦, ಶಕ ವರ್ಷ ೧೯೨೫) | ಸಂಚಿಕೆ ೪೦ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಾನೂನು ಸಚಿವಾಲಯ

**ವಿಷಯ:** ನಿವೃತ್ತ ನ್ಯಾಯಾಂಗ ಅಧಿಕಾರಿಗಳ ತುಟ್ಟಿ ಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 110 ಎಲ್‌ಎಸಿ 2001, ದಿನಾಂಕ: 25.2.2003.

2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2003, ದಿನಾಂಕ: 7-6-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ:1-7-2002 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ತುಟ್ಟಿಭತ್ಯೆಯ ಲಾಭವನ್ನು ದಿನಾಂಕ:1-7-1996 ರಂದು ಅಥವಾ ತದನಂತರ ನಿವೃತ್ತಿ ಹೊಂದಿರುವ ನ್ಯಾಯಾಂಗ ಅಧಿಕಾರಿಗಳಿಗೆ ತುಟ್ಟಿಭತ್ಯೆಯ ದರವನ್ನು ಅವರ ವಿಶ್ರಾಂತಿ ವೇತನದ ಹಾಲಿ ಇರುವ ಶೇಕಡ 43 ರಿಂದ 46ಕ್ಕೆ ಹೆಚ್ಚಿಸಿ ಮಂಜೂರಾತಿ ನೀಡಿದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ದಿನಾಂಕ:1-1-2003 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇಕಡ 52 ರಿಂದ 55ಕ್ಕೆ ಹೆಚ್ಚಿಸಿ ಮಂಜೂರಾತಿ ನೀಡಲಾಗಿದೆ. ಈ ಸೌಲಭ್ಯವನ್ನು ನಿವೃತ್ತ ನ್ಯಾಯಾಂಗ ಅಧಿಕಾರಿಗಳಿಗೆ ವಿಸ್ತರಿಸಬೇಕಾದ ಕಾರಣ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 110 ಎಲ್‌ಎಸಿ 2001, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಸರ್ಕಾರವು ದಿನಾಂಕ:1-1-2003 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ತುಟ್ಟಿಭತ್ಯೆಯ ಲಾಭವನ್ನು ದಿನಾಂಕ:1-7-1996 ರಂದು ಅಥವಾ ತದನಂತರ ನಿವೃತ್ತಿ ಹೊಂದಿರುವ ನ್ಯಾಯಾಂಗ ಅಧಿಕಾರಿಗಳಿಗೆ ಅವರ ವಿಶ್ರಾಂತಿ ವೇತನದ ಹಾಲಿ ಇರುವ ಶೇಕಡ:46 ರಿಂದ 49ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 874 ವೆಚ್ಚ-7 2003 ದಿನಾಂಕ:18-8-2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1156

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಗುಲ್ಬರ್ಗಾ ಜಿಲ್ಲೆ ಆಳಂದ ಕಂದಾಯ ಕ್ಷೇತ್ರಕ್ಕೆ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ದಿನಾಂಕ:9-7-2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ:9-7-03ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಗುಲ್ಬರ್ಗಾ ಇವರು ಸಿವಿಲ್ ಜಡ್ಜ್ (ಕಿರಿಯಶ್ರೇಣಿ) ಆಳಂದ ಇವರ ಪತ್ರದಲ್ಲಿ ಪ್ರಸ್ತುತ ಆಳಂದ್ ತಾಲ್ಲೂಕಿನಲ್ಲಿ ಜನ ಸಂಖ್ಯೆ:ಹೆಚ್ಚುತ್ತಿದ್ದು ಸಾರ್ವಜನಿಕರು ನೋಟರಿಗಳಲ್ಲದೆ ಬಹಳ ತೊಂದರೆಪಡುತ್ತಿದ್ದಾರೆಂದು, ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ನೋಟರಿ ಹುದ್ದೆ ಸೃಜಿಸುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 98 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ಗುಲ್ಬರ್ಗಾ ಜಿಲ್ಲೆಯ ಆಳಂದ್ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1157 **ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2)

**ವಿಷಯ:** ಶ್ರೀ ಎಂ.ಪಿ. ಕಂಬೇಶ್, ವಕೀಲರು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರನ್ನು ಹೊಸದುರ್ಗ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:9-5-2003ರ ಸರ್ಕಾರಿ ಪತ್ರ ಸಂಖ್ಯೆ:ಲಾ 73 ಎಲ್‌ಸಿಎಲ್ 03.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಡಿಜೆಸಿ.ನಂ.10035:03, ದಿನಾಂಕ: 18-7-2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 9-5-2003ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ.ಡಿ. ರಂಗನಾಥ, ನೋಟರಿ, ಹೊಸದುರ್ಗ ಇವರ ನಿಧನದಿಂದ ತೆರವಾದ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಚಿತ್ರದುರ್ಗ ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ (2) ದಿನಾಂಕ:18-7-2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ರವರು ಅರ್ಜಿಯನ್ನು ಆಹ್ವಾನಿಸಿ 4 ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 73 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಂ.ಪಿ. ಕಂಬೇಶ್, ವಕೀಲರು, ಬಿನ್ ಲೇಟ್ ಬಿ. ಈಶ್ವರಪ್ಪ, ಹುಳಿಯಾರ್ ಸರ್ಲಿ ಮುಖ್ಯ ರಸ್ತೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊಸದುರ್ಗ ಕಂದಾಯ ತಾಲ್ಲೂಕು ಕ್ಷೇತ್ರದ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1158 **ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2)

**ವಿಷಯ:** ಕರ್ನಾಟಕ ಜ್ಯುಡಿಷಿಯಲ್ ಅಕಾಡಮಿ, ಬೆಂಗಳೂರು ಇದರ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ-

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 112 ಎಲ್‌ಎಎಂ 99, ದಿನಾಂಕ:28-5-1999.
2. ಸರ್ಕಾರಿ ಆದೇಶ ಸಂಖ್ಯೆ: ಲಾ 112 ಎಲ್‌ಎಎಂ 99, ದಿನಾಂಕ:25-8-1999.
3. ಸರ್ಕಾರಿ ಆದೇಶ ಸಂಖ್ಯೆ: ಲಾ 112 ಎಲ್‌ಎಎಂ 99, ದಿನಾಂಕ:04-8-2000.
4. ಸರ್ಕಾರಿ ಆದೇಶ ಸಂಖ್ಯೆ: ಲಾ 158 ಎಲ್‌ಎಸಿ 2002, ದಿನಾಂಕ:24-9-2002.
5. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಆರ್‌ಪಿಎಸ್ 33:2002, ದಿನಾಂಕ:21-6-2003.

**ಪ್ರಸ್ತಾವನೆ:**

1999-2000ನೇ ಸಾಲಿನ ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಜುಡಿಷಿಯಲ್ ಅಕಾಡಮಿಯನ್ನು ಸ್ಥಾಪಿಸಬೇಕೆಂಬ ಪ್ರಸ್ತಾವನೆ ಸೇರಿತ್ತು. ಅದರ ಅನ್ವಯ ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯದ ಶಿಫಾರಸ್ಸಿನ ಮೇರೆಗೆ ಕರ್ನಾಟಕದಲ್ಲಿ ಜುಡಿಷಿಯಲ್ ಅಕಾಡಮಿಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಅಕಾಡಮಿಯ ಕಾರ್ಯ ನಿರ್ವಹಣೆಗಾಗಿ ಕರ್ನಾಟಕ ಉಚ್ಚ ನ್ಯಾಯಾಲಯ ಪ್ರಸ್ತಾಪಿಸಿದಂತೆ, ಅಧಿಕಾರಿಗಳು-8 ಹುದ್ದೆಗಳು, ಸಿಬ್ಬಂದಿ ವರ್ಗದ-51 ಹುದ್ದೆಗಳು ಮತ್ತು ಹಾಸ್ಟೆಲ್‌ಗಾಗಿ-13 ಹುದ್ದೆಗಳ ಸೃಜನೆಗಾಗಿ ಕರ್ನಾಟಕ ಉಚ್ಚ ನ್ಯಾಯಾಲಯದಿಂದ ಬಂದ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಆ ಪೈಕಿ ಅಧಿಕಾರಿಗಳ-8 ಹುದ್ದೆಗಳು, ಸಿಬ್ಬಂದಿ ವರ್ಗದ-31 ಹುದ್ದೆಗಳು ಹಾಗೂ ಹಾಸ್ಟೆಲ್‌ಗಾಗಿ-13 ಹುದ್ದೆಗಳನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಅಕಾಡಮಿಯ ಕಾರ್ಯನಿರ್ವಹಣೆಗಾಗಿ ಕರ್ನಾಟಕ ಉಚ್ಛ ನ್ಯಾಯಾಲಯ ಪ್ರಸ್ತಾಪಿಸಿದಂತೆ ಸಿಬ್ಬಂದಿ ವರ್ಗಕ್ಕೆ ಸೇರಿದ ಉಳಿದ 20 ಹುದ್ದೆಗಳ ಸೃಜನೆಗಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ ಮತ್ತು ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಸದರಿ ಅಕಾಡಮಿಯ ಕಾರ್ಯಾವಧಿಯು ದಿನಾಂಕ:24-8-2003ಕ್ಕೆ ಪೂರ್ಣಗೊಳ್ಳಲಿದೆ.

ಕರ್ನಾಟಕ ಜುಡಿಷಿಯಲ್ ಅಕಾಡಮಿಯು ರಾಜ್ಯ ಸರ್ಕಾರದ ನ್ಯಾಯಾಂಗ ಅಧಿಕಾರಿಗಳಿಗೆ, ಮುಖ್ಯವಾಗಿ ಹೊಸ ನೇಮಕಾತಿಯಾದವರಿಗೆ ಮತ್ತು ರಾಜ್ಯ ಸರ್ಕಾರದ ನ್ಯಾಯ ಪರಿಪಾಲನೆಗೆ ಸಂಬಂಧಿಸಿದಂತೆ ಪೊಲೀಸ್ ಅಧಿಕಾರಿಗಳಿಗೆ, ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರಿಗೆ, ವೈದ್ಯಕೀಯ ಅಧಿಕಾರಿಗಳಿಗೆ ತರಬೇತಿಯನ್ನು ನೀಡಲು ಸ್ಥಾಪಿತವಾಗಿದ್ದು, ಅದರ ಕಾರ್ಯಾವಧಿಯನ್ನು ಖಾಯಂಆಗಿ ಮುಂದುವರೆಸಬೇಕೆಂದು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 234 ಎಲ್‌ಎಸಿ 2001, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಅನುಬಂಧದಲ್ಲಿ ತಿಳಿಸಿರುವ ಕರ್ನಾಟಕ ಜುಡಿಷಿಯಲ್ ಅಕಾಡಮಿ, ಬೆಂಗಳೂರು ಹಾಗೂ ಅದರ ಸಿಬ್ಬಂದಿ ಹುದ್ದೆಗಳನ್ನು ಇನ್ನೂ ಎರಡು ವರ್ಷದ ಅವಧಿಗೆ ಅಂದರೆ ದಿನಾಂಕ:25-8-2003 ರಿಂದ 24-8-2005ರ ವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-800-8-00-ಕರ್ನಾಟಕ ನ್ಯಾಯಾಂಗ ಅಕಾಡಮಿ ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಸರ್ಕಾರಿ ಆದೇಶ ಸಂಖ್ಯೆ: ಲಾ 234 ಎಲ್‌ಎಸಿ 2001, ಬೆಂಗಳೂರು, ದಿನಾಂಕ: 18-8-2003ಕ್ಕೆ ಅನುಬಂಧ**

| ಕ್ರ. ಸಂ. | ಮುಂದುವರೆಸಬೇಕಾದ ಅಕಾಡಮಿ ಹೆಸರು | ಸಿಬ್ಬಂದಿ ಹುದ್ದೆ | ಅಕಾಡಮಿಯ ಹುದ್ದೆಗಳ ಮಂಜೂರಾತಿಯ ಮೂಲ ಆದೇಶ ಸಂಖ್ಯೆ | ಮುಂದುವರೆಸಲಾದ ಅವಧಿ |
| --- | --- | --- | --- | --- |
| 1 | 2 | 3 | 4 | 5 |
| | | **ಅಧಿಕಾರಿಗಳು** | | |
| 1. | ಕರ್ನಾಟಕ ಜ್ಯುಡಿಷಿಯಲ್ ಅಕಾಡಮಿ ಬೆಂಗಳೂರು | 1) ನಿರ್ದೇಶಕರು, (ಜಿಲ್ಲಾ ನ್ಯಾಯಾಧೀಶರ ಸೂಪರ್ ಟೈಮ್ ವೇತನ ಶ್ರೇಣಿ) 1 (ಒಂದು)<br>2) ಹೆಚ್ಚುವರಿ ನಿರ್ದೇಶಕರು (ಜಿಲ್ಲಾ ನ್ಯಾಯಾಧೀಶರ ಶ್ರೇಣಿ) 1 (ಒಂದು)<br>3) ಹಿರಿಯ ಫ್ಯಾಕಲ್ಟಿ ಸದಸ್ಯರು (ಜಿಲ್ಲಾ ನ್ಯಾಯಾಧೀಶರು ಶ್ರೇಣಿ ಅಥವಾ ನಿವೃತ್ತ ಜಿಲ್ಲಾ ನ್ಯಾಯಾಧೀಶರ ಶ್ರೇಣಿ) 1 (ಒಂದು)<br>4) ಉಪ ನಿರ್ದೇಶಕರು ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ ಶ್ರೇಣಿ) 1 (ಒಂದು)<br>5) ಆಡಳಿತಾಧಿಕಾರಿ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ ಶ್ರೇಣಿ) 1 (ಒಂದು)<br>6) ಸಹಾಯಕ ನಿರ್ದೇಶಕರು ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ ಶ್ರೇಣಿ) 1 (ಒಂದು)<br>7) ಶಾಖಾಧಿಕಾರಿ (ಲೆಕ್ಕ ಪತ್ರ) : ಆಡಳಿತ 2 (ಎರಡು)<br>**ಒಟ್ಟು 8 (ಎಂಟು)** | ಲಾ 112 ಎಲ್‌ಎಎಂ 99 ದಿನಾಂಕ:25-8-99 | ದಿನಾಂಕ:25-8-2003 ರಿಂದ ದಿನಾಂಕ:24-8-2005ರ ವರೆಗೆ |
| | | **ಸಿಬ್ಬಂದಿ** | | |
| | | 1) ಹಿರಿಯ ಸಹಾಯಕರು - 2 (ಎರಡು)<br>2) ಲೈಬ್ರೆರಿಯನ್ - 1 (ಒಂದು)<br>3) ಶೀಘ್ರಲಿಪಿಗಾರರು - 3 (ಮೂರು)<br>4) ಸಹಾಯಕರು - 2 (ಎರಡು)<br>5) ಕಿರಿಯ ಸಹಾಯಕರು - 2 (ಎರಡು)<br>6) ಬೆರಳಚ್ಚುಗಾರರು - 2 (ಎರಡು)<br>7) ಲೈಬ್ರರಿ ಅಸಿಸ್ಟೆಂಟ್ - 1 (ಒಂದು)<br>8) ಡ್ರೈವರ್ಸ್ - 3 (ಮೂರು)<br>9) ಅಟೆಂಡರ್ಸ್ - 6 (ಆರು)<br>10) ಜವಾನರು - 3 (ಮೂರು) | - ಅದೇ - | - ಅದೇ - |

| 1 | 2 | 3 | | | 4 | 5 |
|---|---|---|---|---|---|---|
| | | **ಸಿಬ್ಬಂದಿ** | | | | |
| | | 11) | ಪ್ಯಾಂಟ್ರಿ ಸ್ಟಾಫ್ | - 2 (ಎರಡು) | - ಅದೇ - | - ಅದೇ - |
| | | 12) | ವಾಚ್‌ಮನ್ | - 3 (ಮೂರು) | | |
| | | 13) | ಗಾರ್ಡ್‌ನರ್ | - 1 (ಒಂದು) | | |
| | | | **ಒಟ್ಟು** | **31 (ಮೂವತ್ತೊಂದು)** | | |
| | | **ಹಾಸ್ಟೆಲ್‌ಗಾಗಿ ಹುದ್ದೆಗಳು** | | | | |
| | | 1) | ಹಾಸ್ಟೆಲ್ ಅಡ್ಮಿನಿಸ್ಟ್ರೇಟೀವ್ ಆಫೀಸರ್ | - 1 (ಒಂದು) | - ಅದೇ - | - ಅದೇ - |
| | | 2) | ಹಿರಿಯ ಸಹಾಯಕ | - 1 (ಒಂದು) | | |
| | | 3) | ಹಾಸ್ಟೆಲ್ ಸ್ಟೋರ್ಸ್ ಕೀಪರ್ | - 2 (ಎರಡು) | | |
| | | 4) | ಜವಾನರು | - 3 (ಮೂರು) | | |
| | | 5) | ವಾಚ್‌ಮನ್ (ಒಂದು ಹುದ್ದೆ ರಜೆ ಮೀಸಲಾತಿ) | - 3 (ಮೂರು) | | |
| | | 6) | ಸ್ವೀಪರ್-ಕಮ್-ಸ್ಕ್ಯಾವೆಂಜರ್ಸ್ | - 3 (ಮೂರು) | | |
| | | | **ಒಟ್ಟು** | **13 (ಹದಿಮೂರು)** | | |
| | | **ಹುದ್ದೆಗಳು** | | | | |
| | | 1) | ಹಿರಿಯ ಸಹಾಯಕರು | - 2 (ಎರಡು) | ಲಾ 112 ಎಲ್ಎಎಂ 99 ದಿನಾಂಕ:4-8-2000 | - ಅದೇ - |
| | | 2) | ಶೀಘ್ರಲಿಪಿಗಾರರು | - 4 (ನಾಲ್ಕು) | | |
| | | 3) | ಪ್ರಥಮ ದರ್ಜೆ ಸಹಾಯಕರು | - 2 (ಎರಡು) | | |
| | | 4) | ಕಿರಿಯ ಸಹಾಯಕರು | - 2 (ಎರಡು) | | |
| | | 5) | ಬೆರಳಚ್ಚುಗಾರರು | - 1 (ಒಂದು) | | |
| | | 6) | ವಾಹನ ಚಾಲಕರು | - 3 (ಮೂರು) | | |
| | | 7) | ಅಟೆಂಡರ್ | - 2 (ಎರಡು) | | |
| | | 8) | ಜವಾನರು | - 1 (ಒಂದು) | | |
| | | 9) | ಪ್ಯಾಂಟ್ರಿ ಸ್ಟ್ಯಾಫ್ | - 2 (ಎರಡು) | | |
| | | 10) | ಗಾರ್ಡ್‌ನರ್ | - 1 (ಒಂದು) | | |
| | | | **ಒಟ್ಟು** | **- 20 (ಇಪ್ಪತ್ತು)** | | |

**ಚಿಕ್ಕಹನುಮಂತಯ್ಯ**

ಪಿ.ಆರ್. 1159 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಶ್ರೀ ಬಿ.ಬಿ. ಗುರುದೇವ, ಸಹಾಯಕ ಸರ್ಕಾರಿ ಅಭಿಯೋಜಕರು, ಮಾಗಡಿ, ಇವರ ಜುಲೈ 1997 ರಿಂದ ಸೆಪ್ಟೆಂಬರ್ 1998ರ ಅವಧಿಯ ಪ್ರಯಾಣ ಭತ್ಯೆ ಬಿಲ್ಲುಗಳಿಗೆ ವಿಳಂಬ ಮನ್ನ ಮಾಡುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಅಭಿಯೋಜ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ರವರ ಪತ್ರ ಸಂ: ಡಿಪಿಎನ್:ಲೆಕ್ಕ-1:ಜೆಎ.88:2000-01 ದಿನಾಂಕ:29-3-2001.
2. ಸರ್ಕಾರದ ಪತ್ರ ಸಂಖ್ಯೆ. ಲಾ 135 ಪಿಪಿಇ 01, ದಿನಾಂಕ:19-4-01.
3. ಅಭಿಯೋಗ ನಿರ್ದೇಶಕರ ಪತ್ರ.ಸಂ.ಡಿಪಿಎನ್:ಲೆಕ್ಕ-1:ಟಿಎ:88:2000-01,ದಿನಾಂಕ:27-4-01.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ದಿನಾಂಕ:9-9-2002.
5. ಡಿಪಿಎನ್:ಲೆಕ್ಕ-1:63:01-02 ದಿನಾಂಕ:10-3-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು, ಶ್ರೀ ಬಿ.ಬಿ. ಗುರುದೇವ, ಸಹಾಯಕ ಸರ್ಕಾರಿ ಅಭಿಯೋಜಕರು ಮಾಗಡಿರವರು ಜುಲೈ 97 ರಿಂದ ಸೆಪ್ಟೆಂಬರ್ 1998ರ ಅವಧಿಯ ತಮ್ಮ ಪ್ರಯಾಣ ಭತ್ಯೆ ಬಿಲ್ಲುಗಳನ್ನು ಮೇಲು ಸಹಿಗಾಗಿ ಸಲ್ಲಿಸಿದ್ದವುಗಳನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಸದರಿ ಅಧಿಕಾರಿಯವರು ಮೇಲ್ಕಂಡ ಬಿಲ್ಲುಗಳನ್ನು ವಿಳಂಬವಾಗಿ ಸಲ್ಲಿಸಿದ್ದು ಅದಕ್ಕೆ ಅವರು ನೀಡಿರುವ ಕಾರಣ ಸತ್ಯಾಂಶದಿಂದ ಕೂಡಿಲ್ಲದೇ ಇರುವುದರಿಂದ ಅವರ ಮನವಿ ಪರಿಗಣಿಸುವುದು ಸೂಕ್ತವಲ್ಲ ಎಂಬ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಪರಿಶೀಲಿಸಿ, ಕೆ.ಎಫ್‌ಸಿ. ಅನುಚ್ಛೇದ 20(ಎ) ಮತ್ತು 20(ಬಿ) ಪ್ರಕಾರ ಹಾಗೂ ಕೆಸಿಎಸ್‌ಆರ್ ನಿಯಮ 57ರ ಪ್ರಕಾರ ಶ್ರೀ ಬಿ.ಬಿ. ಗುರುದೇವ ರವರ ಮನವಿ ಪರಿಗಣಿಸಲು ಸಾಧ್ಯವಿಲ್ಲವೆಂಬುದನ್ನು ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ತಿಳಿಸಿದ್ದನ್ನು ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಅಭಿಯೋಗ ನಿರ್ದೇಶಕರು ಶ್ರೀ ಬಿ.ಬಿ. ಗುರುದೇವರವರಿಗೆ ಅಭಿಯೋಗ ನಿರ್ದೇಶಕರು ತಿಳಿಸಿರುತ್ತಾರೆ. ಇದನ್ನು ಶ್ರೀ ಬಿ.ಬಿ. ಗುರುದೇವ ರವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ(ಸಂ.6186:2001) ಸಲ್ಲಿಸಿ ಪ್ರಶ್ನೆ ಮಾಡಿರುತ್ತಾರೆ. ಸದರಿ ಅರ್ಜಿಯ ಮೇಲೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಆದೇಶ ನೀಡಿ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 22-ಎ ಪ್ರಕಾರ ಪರಿಶೀಲಿಸಿ ಸೂಕ್ತ ಆದೇಶ ಹೊರಡಿಸುವಂತೆ ತಿಳಿಸಿರುತ್ತದೆ. ಅಲ್ಲದೇ ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಸಂಬಂಧಿಸಿದ ಅಧಿಕಾರಿಗಳಿಂದ ಬಿಲ್ಲುಗಳನ್ನು ಸತ್ಯಾಪನೆ ಮಾಡಿಸಿ ಸಲ್ಲಿಸಿರುವ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 236 ಪಿಪಿಇ 2001, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಶ್ರೀ ಬಿ.ಬಿ. ಗುರುದೇವ, ಸಹಾಯಕ ಸರ್ಕಾರಿ ಅಭಿಯೋಜಕರು ಮಾಗಡಿ ಇವರ ಜುಲೈ 1997 ರಿಂದ ಸೆಪ್ಟೆಂಬರ್ 1998ರ ವರೆಗಿನ ಕೆಳಕಂಡ ಪ್ರಯಾಣ ಭತ್ಯೆ ಬಿಲ್ಲುಗಳಿಗೆ ಕರ್ನಾಟಕ ಆರ್ಥಿಕ ಅನುಚ್ಛೇದ 20 ಮತ್ತು 22 ರನ್ವಯ ಕೆಳಕಂಡ ಷರತ್ತಿಗೆ ಒಳಪಡಿಸಿ ವಿಳಂಬ ಮನ್ನ ಮಾಡಲಾಗಿದೆ.

ಈ ಆದೇಶವನ್ನು ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-7-96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**ಷರತ್ತು:-** ಸರ್ಕಾರದ ಆದೇಶ ಸಂ.ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-7-96ರ ಅನುಬಂಧ 21 (ಸಿ) ಪ್ರಕಾರ ಸತ್ಯಾಪನೆ ಪ್ರಮಾಣ ಪತ್ರವನ್ನು ಆಯಾ ಬಿಲ್ಲಿನಲ್ಲಿಯೇ ನಮೂದಿಸತಕ್ಕದ್ದು.

| | | | | | |
|---|---|---|---|---|---|
| 1) | 7:97 | ರೂ. 1502.00 | 9) | 3:98 | 1502.00 |
| 2) | 8:97 | 751.00 | 10) | 4:98 | 761.00 |
| 3) | 9:97 | 1502.00 | 11) | 5:98 | 2284.00 |
| 4) | 10:97 | 751.00 | 12) | 6:98 | 761.00 |
| 5) | 11:97 | 751.00 | 13) | 7:98 | 2504.00 |
| 6) | 12:97 | 1502.00 | 14) | 8:98 | 2284.00 |
| 7) | 1:98 | 2254.00 | 15) | 9:98 | 2834.00 |
| 8) | 2:98 | 1502.00 | | ರೂ. | 23,445.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1160

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2)

## FOREST, ECOLOGY AND ENVIRONMENT SECRETARIAT

**Sub:** Renewal of mining lease No.1676 in favour of V.N.K.Menon, Sandur for manganese ore mines over an area of 22.45ha. in S.M.Block, Sandur Taluk Bellary District - reg.

**Read:**
1. Letter No.A5(B1)MNG.CR.1/2000-01 dated 18/4/2001 and 25/6/2001 of the Principal Chief Conservator of Forests, Bangalore.
2. State Government letter of even number dated 17-07-2001.
3. Government of India, Ministry of Environment and Forests, New Delhi, letter No.2-1/99-FC dated 05-02-2003.
4. Government of India, Ministry of Environment and Forests, New Delhi, letter No.8-73/2001-FC dated 25-07-2003.

**PREAMBLE:**

The Principal Chief Conservator of Forests, Bangalore had sent proposal vide his letter dated 18-04-2001 read at (1) above for renewal of mining lease No.1676 in favour of V.N.K.Menon, Sandur for manganese ore mines over an area of 22.45ha. in S.M.Block, Sandur Taluk Bellary District under section-2 of Forest (Conservation) Act, 1980 for a period of twenty years subject to certain conditions.

The proposal of Principal Chief Conservator of Forests was recommended to Government of India, ministry of Environment and Forests, New Delhi vide letter of even number dated 17-07-2001 read at (2) above and its approval was sought under section-2 of Forest (Conservation) Act, 1980 for the renewal of mining lease No. 1676 in favour of V.N.K. Menon, Sandur, Bellary District.

The Government of India, Ministry of Environment and Forests, New Delhi vide their letter dated 05-02-2003 read at (3) above after considering all the facts of the proposal have accorded temporary working permission for six months with effect from 05-02-2003 subject to the conditions that no new area shall be broken up and all environmental safeguards shall be adhered to.

Thereafter, Government of India, Ministry of Environment and Forests, New Delhi vide their letter dated 25$^{th}$ July 2003 read at (4) above after careful consideration of the proposal of the State Government and on the basis of the recommendation of the Advisory Committee, the Central Government has conveyed its approval under Section 2 of Forest (Conservation) Act, 1980 for renewal of mining lease No.1676 for manganese mining over 22.45 ha. of already broken-up forest land in favour of Shri V.N.K.Menon in district Bellary subject to fulfillment of certain conditions. Hence, this order.

**Government Order No. FEE 27 FFM 2001, Bangalore, Dated: 6$^{th}$ September 2003**

After examining all aspect of the matter and in view of the approval accorded to the proposal by the Government of India, Ministry of Environment and Forests, New Delhi, Government are pleased to accord its approval under section 2 of Forest (Conservation) Act, 1980 for renewal of mining lease No. 1676 for manganese mining over 22.45 ha. of already broken-up forest land in favour of Shri V.N.K.Menon in district Bellary subject to fulfillment of following conditions:-

1. Legal status of the forest shall remain unchanged.
2. RCC pillars of 4 feet height shall be erected by the User Agency to demarcate the area at the project cost and the pillars will be marked with forward and back bearing, if not done earlier.

3. The User agency shall create and maintain Safety Zone already created over equivalent degraded forest land and will also maintain the plantation done over an area one and half times in extent of the safety zone at the project cost, if not done earlier.

4. The User Agency will reclaim the area concurrent to mining at the project ccost.

5. No trees shall be felled.

6. No new construction activity shall be allowed on a forest land.

7. No labour camps shall be established on the forest land.

8. Sufficient firewood shall be provided by the User Agency to the labourers at the project cost after purchase from the State Forest Department/Forest Development Corporation.

9. The User Agency shall ensure that there should be no damage to the available wildlife.

10. The approval under the Forest(Conservation) Act, 1980 is subject to the clearance under the Environment (Protection) Act, 1986, if applicable

11. The lease period shall be co-terminus with the lease granted under MMRD Act, 1957.

12. The forest land shall not be used for any purpose other than that specified in the proposal.

13. Inspector General of Forests and a member of FAC shall visit the site to look into the feasibility if any other condition like imposition of additional compensatory afforestatioin etc. is required.

14. Any other condition that the State Government as well as CCF (Central), Regional Office, Bangalore, may impose from time to time for the protection and improvement of flora and fauna in the forest area.

15. The lessee shall pay usual lease rent and supervision charges as prescribed by the Govt. from time to time.

16. The lessee shall deposit the amount at prevailing rate towards raising of compensatory afforestation.

17. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.

18. The lessee shall undertake the afforestation measures in vacant area of the leased area.

19. The lessee shall carry out soil and water conservation measures and other necessary measures as advised by the Forest Dept.

20. The lessee shall undertake to protect rigidly the leased area and forest area surrounding the area up to one Km. From the leased area.

21. The lessee shall not cut any trees without prior permission of the Forest Dept. and all produce of permitted fellings shall be handed over to Forest Dept. under cover of receipt.

22. The lessee shall abide by all the conditions prescribed by Govt. of India and Govt. of Karnataka.

23. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.

24. The lessee shall take-up the planting work on the static dumps during the advance mining operations.

25. In case of violation of agreement conditions Forest Dept. shall have right to suspend the mining activities.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1161

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ.ಎಂ. ವಿಜಯಶಂಕರ್, ಕೆ.ಎ.ಎಸ್ (ಕಿರಿಯ ಶ್ರೇಣಿ) ಪರೀಕ್ಷಾರ್ಥಿ ಅಧಿಕಾರಿ ಇವರ ಜನ್ಮ ದಿನಾಂಕ ತಿದ್ದುಪಡಿ ಬಗ್ಗೆ.

**ಓದಲಾಗಿದೆ:**

1. ಶ್ರೀ ಬಿ.ಎಂ. ವಿಜಯ ಶಂಕರ್ ಇವರ ಮನವಿ ದಿನಾಂಕ: 12-4-2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 130 ಆಸೇಇ 2001, ದಿನಾಂಕ: 4-7-2001.
3. ವಿಚಾರಣಾಧಿಕಾರಿ ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು ಇಲಾಖೆ ಇವರ ವಿಚಾರಣಾ ವರದಿ ಸಂಖ್ಯೆ: ಲಾ 3 ಜೆಡಿವಿ 2001, ದಿನಾಂಕ: 12-12-2002.

**ಪ್ರಸ್ತಾವನೆ:**

ಶ್ರೀ ಬಿ.ಎಂ. ವಿಜಯಕುಮಾರ್, ಕೆ.ಎ.ಎಸ್ (ಕಿರಿಯ ಶ್ರೇಣಿ) ಪರೀಕ್ಷಾರ್ಥಿ ಅಧಿಕಾರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಅವರ ಜನ್ಮ ದಿನಾಂಕ: 12-6-1960 ಎಂದು ಇರುವುದನ್ನು 12-6-1961 ಎಂದು ತಿದ್ದುಪಡಿ ಮಾಡುವಂತೆ ಕೋರಿರುತ್ತಾರೆ.

ಇವರ ಮನವಿಯ ಬಗ್ಗೆ 1974ರ ಕರ್ನಾಟಕ ರಾಜ್ಯ ನೌಕರರ (ವಯೋ ನಿರ್ಧರಣಾ) ಕಾಯ್ದೆಯ ಕಲಂ 5ರಡಿಯಲ್ಲಿ ವಿಚಾರಣೆ ನಡೆಸಿ ವರದಿ ನೀಡುವಂತೆ ಸದರಿ ಕಾಯ್ದೆಯಡಿಯಲ್ಲಿ ನೇಮಕಗೊಂಡಿರುವ ವಿಚಾರಣಾಧಿಕಾರಿಯಾದ ಸರ್ಕಾರದ ಉಪಕಾರ್ಯದರ್ಶಿ, ಕಾನೂನು ಇಲಾಖೆ ಇವರಿಗೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ವಹಿಸಲಾಗಿತ್ತು. ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ವರದಿಯಲ್ಲಿ ಶ್ರೀ ಬಿ.ಎಂ. ವಿಜಯಶಂಕರ್‌ರವರ ಸರಿಯಾದ ಜನ್ಮ ದಿನಾಂಕವನ್ನು ದಿನಾಂಕ: 12-6-1961 ಎಂದು ನಿರ್ಧರಿಸಿ ವಿಚಾರಣಾ ವರದಿ ನೀಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 130 ಆಸೇಇ 2001, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2003**

ಶ್ರೀ ಬಿ.ಎಂ. ವಿಜಯಶಂಕರ್, ಕೆ.ಎ.ಎಸ್ (ಕಿರಿಯ ಶ್ರೇಣಿ) ಪರೀಕ್ಷಾರ್ಥಿ ಅಧಿಕಾರಿ ಹಾಲಿ ಉಪವಿಭಾಗಾಧಿಕಾರಿ, ಬಸವ ಕಲ್ಯಾಣ ಉಪ ವಿಭಾಗ, ಬಸವಕಲ್ಯಾಣ, ಬೀದರ್ ಜಿಲ್ಲೆ ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ನೌಕರರ (ವಯೋ ನಿರ್ಧರಣಾ) ಕಾಯ್ದೆ, 1974ರ ಪ್ರಕಾರ 12-6-1960 ಎಂದು ಇರುವುದನ್ನು ತಿದ್ದುಪಡಿ ಮಾಡಿ 12-6-1961 ಎಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1162

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಮತ್ತು ಅಶೋಕ್ ಜಿ. ಭಟ್, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಕ್ರಮಾಂಕ:ಸಿಆಸುಇ 66 ಎಸ್‌ಇಎನ್ 2002, ದಿನಾಂಕ: 23-4-2003.

**ಪ್ರಸ್ತಾವನೆ:**

1989ನೇ ಇಸವಿ ನವೆಂಬರ್ 24 ರಂದು ನಡೆದ ಲೋಕ ಸಭಾ ಮತ್ತು ರಾಜ್ಯ ವಿಧಾನ ಸಭಾ ಚುನಾವಣೆಯಲ್ಲಿ ಹಳಿಯಾಳ ಮತ ಕ್ಷೇತ್ರದ ಚುನಾವಣೆಯಲ್ಲಿ ಕ್ರಮವಾಗಿ ನಿರ್ವಚನಾಧಿಕಾರಿ ಮತ್ತು ಸಹಾಯಕ ನಿರ್ವಚನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಹಳಿಯಾಳ ಮತ ಕ್ಷೇತ್ರದ ಮತ ಏಣಿಕೆಯು ಕುಮುಟಾದ ಬಾಳಿಗಾ ಕಾಲೇಜಿನಲ್ಲಿ ನಡೆದು, ಫಲಿತಾಂಶವನ್ನು ಪ್ರಕಟಿಸಿದ ನಂತರ ಚುನಾವಣೆಗೆ ಸಂಬಂಧಿಸಿದ ಮತ ಪತ್ರಗಳನ್ನು ಮೊಹರು ಮಾಡದೇ ಬಾಳಿಗಾ ಕಾಲೇಜು ಕುಮಟದಿಂದ ಮುಂಡಗೋಡು ತಾಲ್ಲೂಕು ಕಛೇರಿಗೆ ಕೊಂಡೊಯ್ದು ಅಲ್ಲಿ ಮತ ಪತ್ರಗಳನ್ನು ಬೇಜಾಬ್ದಾರಿಯಿಂದ ಪ್ಯಾಕ್ ಮಾಡದೇ ಬಿಟ್ಟು 1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆಯ ಸೆಕ್ಷನ್ 134 ಮತ್ತು 336ನ್ನು ಉಲ್ಲಂಘಿಸಿದ್ದಕ್ಕಾಗಿ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಮತ್ತು ಅಶೋಕ್ ಜಿ.ಭಟ್ ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರುಗಳಿಗೆ ಮೇಲೆ ಓದಲಾದ ದಿ: 23-4-2003ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಸದರಿ ನೋಟೀಸ್‌ಗೆ ಅವರುಗಳು ಉತ್ತರವನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಅವರುಗಳ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 66 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಹಾಗೂ ಶ್ರೀ ಅಶೋಕ್, ಜಿ. ಭಟ್, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳನ್ನು ಕುರಿತು ವಿಚಾರಣೆ ನಡೆಸಲು ಉತ್ತರ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಉಪ ವಿಭಾಗಾಧಿಕಾರಿ, ಕಾರವಾರ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1163

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ರೈತರಿಗಾಗಿ ಪರಿಹಾರ ಪ್ಯಾಕೇಜ್ - 2003-04ನೇ ಸಾಲಿನಲ್ಲಿ ಬರಪೀಡಿತ ಪ್ರದೇಶಗಳ ನೀರಾವರಿ ಕ್ಷೇತ್ರಗಳಿಗೆ ನೀರು ಕರ ಮನ್ನಾ ಮಾಡುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಸತತ ಬರ ಪರಿಸ್ಥಿತಿಯಿಂದಾಗಿ ರೈತರು ಬಹಳ ಸಂಕಷ್ಟಕ್ಕೆ ಒಳಗಾಗಿರುವುದರಿಂದ, ರೈತರ ಹಿತರಕ್ಷಣೆ ಮಾಡುವ ಕುರಿತು ಸೂಕ್ತ ಪರಿಹಾರ/ರಿಯಾಯಿತಿಗಳನ್ನು ರೂಪಿಸಲು ಸಹಕಾರ ಸಚಿವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದ್ದು, ಈ ಸಮಿತಿಯು ಮಾನ್ಯ ಮುಖ್ಯಮಂತ್ರಿಗಳೊಂದಿಗೆ ಸಮಾಲೋಚಿಸಿ ಪ್ರಸಕ್ತ ಬರಗಾಲದ ದೃಷ್ಟಿಯಿಂದ ರೈತರಿಗೆ ನೀಡಬಹುದಾದ ರಿಯಾಯಿತಿಗಳ ಸಮಗ್ರ ಪ್ರಸ್ತಾವನೆಯನ್ನು ನೀಡಿದೆ. ಈ ಪ್ಯಾಕೇಜ್‌ನಲ್ಲಿ ರೈತರ ಕೆಲ ಬಾಕಿ ಮನ್ನಾ ಸೇರಿದಂತೆ, 2002ರ ಹಿಂಗಾರು ಪ್ಯಾಕೇಜ್, ಮಾರುಕಟ್ಟೆ ಬೆಂಬಲ ಬೆಲೆ ಮತ್ತು ಪ್ರೋತ್ಸಾಹಕಾರಿ ಕಾರ್ಯಾಚರಣೆಗಳು ಸೇರಿದಂತೆ ಒಟ್ಟು ರೂ.856.00 ಕೋಟಿಗಳ ಪ್ರಸ್ತಾವನೆಗಳನ್ನೊಳಗೊಂಡಿದ್ದು, ಪ್ರಸ್ತಾವನೆಯನ್ನು ಕೂಲಂಕುಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 83 ಎಂಬಿಐ 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿ ಹಿನ್ನೆಲೆಯಲ್ಲಿ, ವಿವಿಧ ನೀರಾವರಿ ಯೋಜನೆಗಳ ಅಚ್ಚುಕಟ್ಟು ಪ್ರದೇಶದ ರೈತರಿಗೆ, 2002-03ನೇ ಸಾಲಿನಲ್ಲಿ ವಿಧಿಸಲಾದ ನೀರು ಕರ ಹಾಗೂ ನಿರ್ವಹಣಾ ಸೆಸ್‌ಅನ್ನು, ಈ ಕೆಳಗೆ ಕಾಣಿಸಿದ ಅನುಪಾತದಂತೆ ಮನ್ನಾ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಸಾಮಾನ್ಯ ನೀರಿನ ಕರ - ಶೇಕಡ 100.
2) ಬೆಳೆ ಉಲ್ಲಂಘನೆ ಕರ - ಶೇಕಡ 50.
3) ಅನಧಿಕೃತ ಬೆಳೆ ದಂಡ ಕರ - ಶೇಕಡ 50.
4) ನಿರ್ವಹಣಾ ಸೆಸ್ - ಶೇಕಡ 100.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಶಂಕರ್**

ಪಿ.ಆರ್. 1164

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಖಷೀರ್ ಅಹಮ್ಮದ್, ಗ್ರಾಮಲೆಕ್ಕಿಗ ಸಾಸಲು ಗ್ರಾಮ ಪಂಚಾಯ್ತಿ ಗೂಳೂರು ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರ ವಿರುದ್ಧ ಲೋಕಾಯುಕ್ತ ಪ್ರಕರಣ ಕುರಿತು ಆರೋಪಗಳಿಂದ ದೋಷ ಮುಕ್ತರನ್ನಾಗಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 176 ಬಿಡಿಪಿ 2001 ದಿನಾಂಕ: 4-1-2002.
2. ಮಾನ್ಯ ಲೋಕಾಯುಕ್ತರ ಪತ್ರ ಸಂಖ್ಯೆ.ಲೋಕ:ಎಆರ್‌ಇ:1:ಇಎನ್‌ಕ್ಯೂ:22:2002-03 ದಿನಾಂಕ:29-5-2003.

**ಪ್ರಸ್ತಾವನೆ:**

ಶ್ರೀ ಖಷೀರ್ ಅಹಮ್ಮದ್, ಗ್ರಾಮಲೆಕ್ಕಿಗ ಸಾಸಲು ಗ್ರಾಮ ಪಂಚಾಯ್ತಿ ಗೂಳೂರು ಹೋಬಳಿ, ತುಮಕೂರು ಜಿಲ್ಲೆ ಇವರು ದಿನಾಂಕ:4-4-95 ರಂದು ಶ್ರೀ ಕೆ. ರಾಮಯ್ಯ ತಂದೆ ಕೆಂಪಚನ್ನಯ್ಯ, ಸಾಸಲು ಗ್ರಾಮ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರ ತಂದೆ ಕೆಂಪಚನ್ನಯ್ಯ ಇವರು ದಿನಾಂಕ:25-2-95 ರಂದು ಮರಣ ಹೊಂದಿದ್ದು, ಅವರ ಮರಣ ಸಮರ್ಥನೆ ಪತ್ರವನ್ನು ಕೊಡಲು ರೂ.200-00 ಅಕ್ರಮ ಸಂಭಾವನೆ ಸ್ವೀಕರಿಸುತ್ತಿದ್ದ ಸಂದರ್ಭದಲ್ಲಿ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದ ಪ್ರಯುಕ್ತ ಇಲಾಖಾ ವಿಚಾರಣೆ ನಡೆಸಲು ಓದಲಾದ (1)ರ ದಿನಾಂಕ:4-1-2002ರ ಆದೇಶದಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ವಿಚಾರಣಾಧಿಕಾರಿಗಳು ಶ್ರೀ ಖಷೀರ್ ಅಹಮ್ಮದ್ ಗ್ರಾಮಲೆಕ್ಕಿಗ ಇವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ. ವಿಚಾರಣಾಧಿಕಾರಿಗಳ ನಿಯಮವನ್ನು ಸಮರ್ಥಿಸುತ್ತಾ ಗೌ:ಲೋಕಾಯುಕ್ತರವರು ಆರೋಪಿ ನೌಕರರನ್ನು ದೋಷಮುಕ್ತರೆಂದು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಖಷೀರ್ ಅಹಮ್ಮದ್ ಇವರ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ.ಕಂಇ 176 ಬಿಡಿಪಿ 2001 ದಿನಾಂಕ: 5ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಖಷೀರ್ ಅಹಮ್ಮದ್ ಗ್ರಾಮಲೆಕ್ಕಿಗ ಸಾಸಲು ಗ್ರಾಮ ಪಂಚಾಯ್ತಿ ಗೂಳೂರು ಹೋಬಳಿ, ತುಮಕೂರು ತಾಲ್ಲೂಕು ಇವರ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲದ ಕಾರಣ, ಅವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ, ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1166

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು 1 & 2)

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಕೆ. ಕೃಷ್ಣಮೂರ್ತಿ, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ, ಅಳಂದ ಇವರನ್ನು ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರಾಗಿ ಮರು ನೇಮಕಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಲಾ 161 ಪಿಪಿಇ 86, ದಿನಾಂಕ: 24.7.89.
2. ಸರ್ಕಾರದ ಆದೇಶ ಸಂಖ್ಯೆ: ಲಾ 187 ಪಿಪಿಇ 91, ದಿನಾಂಕ: 18.1.1992.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 106 ಎಲ್‌ಎಸಿ 97 ದಿನಾಂಕ:18-2-98.
4. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ:ಜಿಒಬಿ(ಐ) 148 98 ದಿನಾಂಕ:20-2-98.
5. ಅಭಿಯೋಗ ಉಪ ನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ ಇವರ ಮೆಮೋ ಸಂಖ್ಯೆ:ಡಿಡಿಐ:ಡಿವಿ: ಸಿಶಾ:218:97-98 ದಿನಾಂಕ:28-2-1998.
6. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಜಿಒಬಿ(1)272:99 ದಿನಾಂಕ:11-2-2003.
7. ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 59 ಎಲ್‌ಎಸಿ 2003 ದಿನಾಂಕ:30-4-03.
8. ಗುಲ್ಬರ್ಗ ಜಿಲ್ಲಾ ನ್ಯಾಯಾಲಯದ ಆದೇಶ ಸಂಖ್ಯೆ:ಇಸಿಜಿ:ಎಡಿಎಂಎನ್:59:2003 ದಿನಾಂಕ:3-5-03.
9. ಶ್ರೀ ಕೆ. ಕೃಷ್ಣಮೂರ್ತಿ ರವರ ಪತ್ರ ದಿನಾಂಕ:7-5-03.
10. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಇಪಿಎನ್:ಸಿಶಾ-1:37:02-03 ದಿನಾಂಕ:9-5-03.
11.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ(1)ರ ಆದೇಶದ ಪ್ರಕಾರ ಶ್ರೀ ಕೆ. ಕೃಷ್ಣಮೂರ್ತಿ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರಾಗಿ ನೇಮಕವಾಗಿದ್ದು, ಹಾವೇರಿಯ ಎಂ ಮತ್ತು ಜೆಎಂಎಫ್‌ಸಿಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸದರಿ ಅಧಿಕಾರಿಯವರ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಘೋಷಿಸಲ್ಪಟ್ಟಿರುತ್ತೆ. ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರದ ಅಧಿಸೂಚನೆ ಪ್ರಕಾರ ಈ ಅಧಿಕಾರಿಯವರು ದಾವಣಗೆರೆ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ಹುದ್ದೆಗೆ ಆಯ್ಕೆಯಾಗಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (4)ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಿನಾಂಕ:2-3-98ರಂದು ಪ್ರಮಾಣ ಮಾಡಲು ಹಾಗೂ ದಿನಾಂಕ:2-3-98ರಿಂದ ದಿನಾಂಕ:21-3-98ರವರೆಗೆ ತರಬೇತಿ ಹೊಂದಲು ಹಾಜರಾಗಬೇಕೆಂದು ಸದರಿ ಅಧಿಕಾರಿಯವರಿಗೆ ನಿರ್ದೇಶನ ನೀಡಲಾಗಿರುತ್ತದೆ. ಮೇಲೆ ಓದಲಾದ ಕ್ರಮಾಂಕ (5)ರ ಪ್ರಕಾರ ಸದರಿ ಅಧಿಕಾರಿಯವರನ್ನು ದಾವಣಗೆರೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ(6)ರ ಅರೆ ಸರ್ಕಾರಿ ಪತ್ರದಲ್ಲಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ)ರಾಗಿ ಆಯ್ಕೆಯಾಗಿ ದಿನಾಂಕ:2-3-98 ರಿಂದ ಕಾರ್ಯನಿರ್ವಹಿಸುವವರ ಪೈಕಿ ನಾಲ್ಕು ಮಂದಿ ಸದರಿ ಹುದ್ದೆಗೆ ಅರ್ಹರಲ್ಲದಿರುವುದರಿಂದ ಅವರನ್ನು ಸದರಿ ಹುದ್ದೆಯ ಸೇವೆಯಿಂದ ಬಿಡುಗಡೆಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಪಟ್ಟಿಯಲ್ಲಿ ಶ್ರೀ ಕೆ. ಕೃಷ್ಣಮೂರ್ತಿಯವರೂ ಒಬ್ಬರಾಗಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (6)ರ ಶಿಫಾರಸ್ಸಿನಂತೆ ಮೇಲೆ ಓದಲಾದ ಕ್ರಮಾಂಕ (7)ರ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಕೆ. ಕೃಷ್ಣಮೂರ್ತಿ, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ, ಅಳಂದ ಇವರ ಸೇವೆಯು ತೃಪ್ತಿಕರವಾಗಿಲ್ಲದ ಕಾರಣ ಇವರನ್ನು ಕೆ.ಸಿ.ಎಸ್ (ಪ್ರೊಬೇಷನ್) ನಿಯಮಾವಳಿ 1977ರ ನಿಯಮ 5(1)(ಬಿ) ಪ್ರಕಾರ ಸದರಿ ಹುದ್ದೆಯ ಸೇವೆಯಿಂದ ಬಿಡುಗಡೆಗೊಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (8)ರ ಆದೇಶದ ಪ್ರಕಾರ ಶ್ರೀ ಕೆ. ಕೃಷ್ಣಮೂರ್ತಿರವರು ಸಿವಿಲ್‌ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಅಳಂದ ಹುದ್ದೆಯ ಪ್ರಭಾರವನ್ನು ದಿನಾಂಕ:5-5-03ರಂದು ವಹಿಸಿಕೊಟ್ಟಿರುತ್ತಾರೆ. ಹಾಗೂ ಸದರಿ ಹುದ್ದೆಯ ಸೇವೆಯಿಂದ ಬಿಡುಗಡೆಗೊಂಡಿರುತ್ತಾರೆ.

ಆದ್ದರಿಂದ ತಮ್ಮನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರಾಗಿ ಕೆ.ಸಿ.ಎಸ್ (ಪ್ರೊಬೇಷನ್) ನಿಯಮಾವಳಿ 1977ರ ನಿಯಮ 5ರಡಿಯಲ್ಲಿ ಮುಂದುವರೆಸಲು ಅವಕಾಶವಿರುವುದರಿಂದ ಸದರಿ ಹುದ್ದೆಯಲ್ಲಿ ವರದಿ ಮಾಡಿಕೊಳ್ಳಲು ಅನುಮತಿ ಕೋರಿರುವ ಮೇಲೆ ಓದಲಾದ ಕ್ರಮಾಂಕ (9)ರ ಶ್ರೀ ಕೆ. ಕೃಷ್ಣಮೂರ್ತಿರವರು ಸರ್ಕಾರಕ್ಕೆ ಹೆಸರಿಸಿ ಸಲ್ಲಿಸಿರುವ ಮನವಿಯನ್ನು ಲಗತ್ತಿಸಿ ಮೇಲೆ ಓದಲಾದ ಕ್ರಮಾಂಕ:(10)ರಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸರ್ಕಾರವೇ ನೇಮಕಾತಿ ಪ್ರಾಧಿಕಾರವಾಗಿರುವುದರಿಂದ, ಸರ್ಕಾರವೇ ಈ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳಬೇಕಾಗಿರುವುದರಿಂದ ಸೂಕ್ತ ಕ್ರಮಕ್ಕಾಗಿ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 102 ಪಿಪಿಇ 03, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2003**

ಶ್ರೀ ಕೆ. ಕೃಷ್ಣಮೂರ್ತಿ, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ಆಳಂದ, ಗುಲ್ಬರ್ಗಾ ಜಿಲ್ಲೆ ಇವರನ್ನು ಕೆ.ಸಿ.ಎಸ್ (ಪ್ರೊಬೇಷನರಿ) ನಿಯಮಾವಳಿಗಳು 1977ರ ನಿಯಮ 5(1)(ಬಿ)ಪ್ರಕಾರ ಸದರಿ ಹುದ್ದೆಯ ಸೇವೆಯಿಂದ ಸರ್ಕಾರವು ಬಿಡುಗಡೆಗೊಳಿಸಿರುವುದರಿಂದ ಇವರನ್ನು ಇದೇ ನಿಯಮಾವಳಿಗಳ ನಿಯಮ 5(1), ಪ್ರಕಾರ ಸದರಿಯವರು ಈ ಹಿಂದೆ ನೇಮಕಗೊಂಡು ಕಾರ್ಯನಿರ್ವಹಿಸುತ್ತಿದ್ದ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ಸರ್ಕಾರವು ಮರುನೇಮಕ ಮಾಡಿ ಸಿ.ಜೆ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ ತೀರ್ಥಹಳ್ಳಿ ಇಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಳ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1165

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎ. ಬಸವಂತ ರೈ ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 45 ಎಸ್‌ಇಎನ್ 95, ದಿನಾಂಕ: 7-9-2001.

**ಪ್ರಸ್ತಾವನೆ:**

ಬೀದರ್ ನಗರಾಭಿವೃದ್ಧಿ ಪ್ರಾಧಿಕಾರದ ಪ್ರಭಾರಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬೀದರ್‌ನ ಶ್ರೀಮತಿ ಪ್ರಯಾಗ್ ಬಾಯಿ ಎಂಬುವರು ಕೆಂಬಲ್ ಕಾಲೋನಿ ನಿವೇಶನ ಸಂಖ್ಯೆ:4ರಲ್ಲಿ ಜಮೀನನ್ನು ವಸತಿ ಪ್ರದೇಶದಲ್ಲಿ ವಾಣಿಜ್ಯ ಮಳಿಗೆ ಹಾಗೂ ಲಾಡ್ಜ್ ಕಟ್ಟಲು ದಿನಾಂಕ:4-6-1990 ರಂದು ಸಲ್ಲಿಸಿದ ಅರ್ಜಿಯ ಬಗ್ಗೆ ವಿಧಿ ವಿಧಾನಗಳನ್ನು ಪಾಲಿಸದೇ ಭೂ ಉಪಯೋಗ ಬದಲಾವಣೆಗೆ ಸರ್ಕಾರದ ಅನುಮತಿ ಪಡೆಯದೇ ಸದರಿಯವರಿಗೆ ಆ ಪ್ರದೇಶದಲ್ಲಿ ವಾಣಿಜ್ಯ ಉಪಯೋಗದ ಕಟ್ಟಡಕ್ಕೆ ದಿನಾಂಕ:11-6-1990ರ ಪ್ರಾರಂಭಿಕ ಪ್ರಮಾಣ ಪತ್ರವನ್ನು ನೀಡುವ ಮೂಲಕ ಗ್ರಾಮಾಂತರ ಯೋಜನಾ ಅಧಿನಿಯಮ 1961ರ ನಿಯಮ 14 ಮತ್ತು 15ನ್ನು ಹಾಗೂ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987ರ ಕಲಂ 13(2) (6)ರ ವಿಧಾನಗಳನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿದ ಆರೋಪಕ್ಕಾಗಿ ಶ್ರೀ ಎ. ಬಸವಂತ ರೈ ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಓದಲಾದ ದಿನಾಂಕ: 7-9-2001ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಜಿಲ್ಲಾಧಿಕಾರಿ, ಬೀದರ್ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಅನಂತರದ ಬೆಳವಣಿಗೆಗಳನ್ನು ಪರಾಮರ್ಶಿಸಿದ ಸರ್ಕಾರವು ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 45 ಎಸ್‌ಇಎನ್ 95 (ಭಾಗ), ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2003**

ಸರ್ಕಾರವು, ವಿಚಾರಣಾಧಿಕಾರಿಗಳನ್ನು ನೇಮಿಸಿದ ದಿನಾಂಕ:7-9-2001ರ ಸರ್ಕಾರಿ ಆದೇಶವನ್ನು ಹಿಂದಕ್ಕೆ ಪಡೆದು ಶ್ರೀ ಎ. ಬಸವಂತ ರೈ, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ಈ ವಿಚಾರಣೆಯಲ್ಲಿನ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಎ. ಬಸವಂತ ರೈ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1167

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಕೇಂದ್ರ ಕಛೇರಿಯ ಆಡಳಿತ ವಿಭಾಗದಲ್ಲಿ ದಿನಾಂಕ:28-12-2002ರಂದು ಜರುಗಿದ ಅಹಿತಕರ ಘಟನೆ ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಮತ್ತು ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ (ಅಮಾನತ್ತಿನಲ್ಲಿ) ಅವರ ವಿರುದ್ಧದ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಏರ್ಪಡಿಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**

1. ಕೈಗಾರಿಕಾಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಅವರ ಪತ್ರ ಸಂಖ್ಯೆ: ಕೈವಾಇ:ನಿರೀ-2:92 ದೂರು:2002-03, ದಿನಾಂಕ:10-01-2003.
2. ಶ್ರೀ ಎ.ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಅವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ:ವಾಕೈ 11 ಕೈಸೇವಿ 2003, ದಿನಾಂಕ:2-7-2003.
3. ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ (ಅಮಾನತ್ತಿನಲ್ಲಿ) ಅವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ:ವಾಕೈ 83 ಕೈಸೇವಿ 2003, ದಿನಾಂಕ:2-7-2003.
4. ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, (ಅಮಾನತ್ತಿನಲ್ಲಿ) ಅವರ ಮನವಿ ದಿನಾಂಕ:20-07-2003.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ:10-01-2003ರ ಪತ್ರದೊಂದಿಗೆ ಕೈಗಾರಿಕಾಭಿವೃದ್ಧಿ ಆಯುಕ್ತರು, ಕೇಂದ್ರ ಕಛೇರಿಯ ಆಡಳಿತ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕೆಲವು ಸಿಬ್ಬಂದಿಯವರು ದಿನಾಂಕ:30-12-2002ರಂದು ಸಲ್ಲಿಸಿರುವ ಮನವಿಯ ಪ್ರತಿಯನ್ನು ಒದಗಿಸಿ, ದಿನಾಂಕ:28-12-2002ರಂದು ಅಪರಾಹ್ನ ಸುಮಾರು 4.45ರ ಸಮಯದಲ್ಲಿ ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ ಮತ್ತು ಶ್ರೀ ಎ.ಆನಂದ್, ಜಂಟಿ ನಿರ್ದೇಶಕರು, ಆಡಳಿತ ವಿಭಾಗಕ್ಕೆ ಭೇಟಿ ನೀಡಿದಾಗ ಅವರಿಬ್ಬರೂ ಒಬ್ಬರನ್ನೊಬ್ಬರು ಅವಾಚ್ಯ ಮಾತುಗಳಿಂದ ನಿಂದಿಸಿದ್ದೂ ಅಲ್ಲದೆ ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಶ್ರೀಮತಿ ನಿಶಾತ್ ಅಯೇಷಾ ರವರು ತಮ್ಮ ಒಂದು ಪಾದರಕ್ಷೆಯನ್ನು ಬೀಸಿದರು ಎಂದು ವಿವರಿಸಿ, ಈ ಘಟನೆಗೆ ಆಡಳಿತ ವಿಭಾಗದ ಸಿಬ್ಬಂದಿಯವರು ಸಾಕ್ಷಿಯಾಗಿದ್ದಾರೆಂದು ತಿಳಿಸಿದ್ದರು. ಈ ಘಟನೆಗೆ ಸಾಕಷ್ಟು ಸಾಕ್ಷ್ಯಾಧಾರಗಳು ಇರುವುದರಿಂದ ಇದು ಒಂದು Primafacie ಎಂದು ಅಭಿಪ್ರಾಯ ಪಟ್ಟು ಈ ಇಬ್ಬರೂ ಅಧಿಕಾರಿಗಳು ಕಛೇರಿ ವೇಳೆಯಲ್ಲಿ ಕಛೇರಿ ಗೌರವಕ್ಕೆ ದಕ್ಕೆ ಉಂಟಾಗುವ ರೀತಿಯಲ್ಲಿ ವರ್ತಿಸಿ, ಕಛೇರಿ ಕಾರ್ಯಕ್ಕೆ ಅಡ್ಡಿ ಉಂಟು ಮಾಡಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(iii) ನ್ನು ಉಲಂಘಿಸಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದಾರೆಂದೂ ಇವರಿಬ್ಬರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಶಿಫಾರಸ್ಸು ಮಾಡಿದ್ದರು.

ಶ್ರೀ ಎ.ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಅವರನ್ನು ಶಿಸ್ತು ಕ್ರಮಕ್ಕೆ ಗುರಿಪಡಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ:02-07-2003ರಂದು ಷೋಕಾಸು ನೋಟೀಸ್‌ನೊಡನೆ ಆರೋಪಣಾ ಪಟ್ಟಿಯನ್ನು ಹೊರಡಿಸಿ ವಿವರಣೆಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ (ಅಮಾನತ್ತಿನಲ್ಲಿ) ಅವರನ್ನು ಸಹ ಶಿಸ್ತು ಕ್ರಮಕ್ಕೆ ಗುರಿಪಡಿಸಲು ಮೇಲೆ (3)ರಲ್ಲಿ ಓದಲಾದ ದಿನಾಂಕ:02-07-2003ರಂದು ಷೋಕಾಸು ನೋಟಿಸ್‌ನೊಡನೆ ಆರೋಪಣಾ ಪಟ್ಟಿಯನ್ನು ಹೊರಡಿಸಿ ವಿವರಣೆಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಶ್ರೀ ಎ.ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ:20-07-2003ರ ಮನವಿಯಲ್ಲಿ ಷೋಕಾಸು ನೋಟೀಸು ಪಡೆದಿರುವುದನ್ನು ದೃಢೀಕರಿಸಿ, ಷೋಕಾಸು ನೋಟಿಸ್‌ನೊಡನೆ ಹೊರಡಿಸಲಾಗಿದ್ದ ಅನುಬಂಧ-3ರಲ್ಲಿ ನಮೂದಿಸಲಾಗಿದ್ದ ಸಿಬ್ಬಂದಿ ವರ್ಗದವರು ಸಲ್ಲಿಸಿರುವ ದಿನಾಂಕ:30-12-2002ರ ಪ್ರತಿಯನ್ನು ಒದಗಿಸಲು ಕೋರಿದ್ದರು. ಸರ್ಕಾರವು ಈ ದಾಖಲೆಯಲ್ಲಿನ ಎಲ್ಲಾ ಸಾಕ್ಷಿದಾರರ ಪಟ್ಟಿಯನ್ನು ಈಗಾಗಲೇ ಶ್ರೀ ಆನಂದ್ ರವರಿಗೆ ನೋಟಿಸ್‌ನೊಂದಿಗೆ ಒದಗಿಸಲಾಗಿದೆ. ಆದ್ದರಿಂದ ಈ ದಾಖಲೆ ಒದಗಿಸುವ ಅವಶ್ಯಕತೆ ಇಲ್ಲವೆಂದು ನಿರ್ಧರಿಸಿತು. ಶ್ರೀಮತಿ ನಿಶಾತ್ ಅಯೇಷಾ ಅವರು ಮೇಲೆ (3)ರಲ್ಲಿ ಓದಲಾದ ಷೋಕಾಸು ನೋಟಿಸ್‌ಗೆ ಯಾವುದೇ ಉತ್ತರ ನೀಡಿರುವುದಿಲ್ಲ.

ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಸರ್ಕಾರವು ವಿಚಾರಣೆಯನ್ನು ಏರ್ಪಡಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 11 ಐಸಿಎಸ್ 2003, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸ್ಥೂಲವಾಗಿ ಪರಿಶೀಲಿಸಿದ ನಂತರ ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಹಾಗೂ ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ (ಅಮಾನತ್ತಿನಲ್ಲಿ) ಈ ಇಬ್ಬರೂ ನೌಕರರುಗಳು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ನಡತೆ ನಿಯಮಗಳನ್ನು ಉಲ್ಲಂಘಿಸಿ, ಸರ್ಕಾರಿ ನೌಕರರಿಗೆ ಸಲ್ಲದ ಕೃತ್ಯವನ್ನು ಎಸಗಿದ್ದಾರೆಂಬ ಆರೋಪಗಳ ಬಗ್ಗೆ ಕೆ.ಎಸ್.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11ರ ಉಪ ನಿಯಮ (5)ನ್ನು ಓದಿಕೊಂಡಂತೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಂಟಿ ವಿಚಾರಣೆಯನ್ನು ನಡೆಸಲು ಶ್ರೀ ಎನ್. ಉಮಾಪತಿ, ಮಾನ್ಯ ನಿವೃತ್ತ ನ್ಯಾಯಾಧೀಶರು, ನಂ.3000-12ಎ ಮುಖ್ಯರಸ್ತೆ, ಹೆಚ್.ಎ.ಎಲ್, 2ನೇ ಹಂತ, ಇಂದಿರಾನಗರ, ಬೆಂಗಳೂರು-8 ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಸದರಿ ವಿಚಾರಣೆಯನ್ನು ಮೂರು ತಿಂಗಳಿನೊಳಗಾಗಿ ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್ (ಸಿಸಿಎ) ನಿಯಮಗಳು 1957ರ ನಿಯಮ 11(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಉಪ ನಿರ್ದೇಶಕರು (ಕೈಗಾರಿಕಾಭಿವೃದ್ಧಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಾಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಅವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ.5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ಮತ್ತು ವಾಹನ ಭತ್ಯೆ ರೂ.1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು)

ಪಿ.ಆರ್. 1168

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2003-2004ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ರಾಜ್ಯದ ಪಾಲಿನ ಹಣ 27 ಜಿಲ್ಲೆಗಳಿಗೆ ಬಿಡುಗಡೆ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17014 : 10 : 2003 ಎಸ್‌ಜಿಎಸ್‌ವೈ (ಡಿಅಡ್‌ಮಿನ್) ಎಸ್‌ಆರ್ ನಂ.24 ದಿನಾಂಕ 13.06.2003.

**ಪ್ರಸ್ತಾವನೆ:**

ಭಾರತ ಸರ್ಕಾರವು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2003-04ನೇ ಸಾಲಿಗೆ ಒಂದನೇ ಕಂತಿನ ಹಣ ರೂ.481.62 ಲಕ್ಷ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ರೂ.160.54 ಲಕ್ಷ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

ರಾಜ್ಯ ಸರ್ಕಾರವು 27 ಜಿಲ್ಲಾ ಪಂಚಾಯತ್‌ಗಳಿಗೆ ಒಂದನೇ ಕಂತಿನ ಹಣ ರೂ.160.54 ಲಕ್ಷಗಳನ್ನು (ರೂ.ಒಂದು ನೂರ ಅರವತ್ತು ಲಕ್ಷದ ಐವತ್ತನಾಲ್ಕು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. {ಅನುಬಂಧ ಲಗತ್ತಿಸಿದೆ.}

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾಪಂಚಾಯತ್‌ಗಳ ಆಡಳಿತ ನಿರ್ವಹಣೆಗಾಗಿ ಉಪಯೋಗಿಸುವುದು.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯ ಕಂಡಿಕೆ 3.7ರ ಪ್ರಕಾರ ರಾಜ್ಯವು ಎಲ್ಲಾ ಜಿಲ್ಲೆಗಳ ಒಟ್ಟು ಅಂಗೀಕಾರಾರ್ಹ ವೆಚ್ಚದ ಶೇಕಡಾ 10ರಷ್ಟು ಹಣವನ್ನು ರಾಜ್ಯ ಕೋಶಕ್ಕೆ ಇಟ್ಟುಕೊಳ್ಳಲು ಅವಕಾಶವಿದೆ. ಇದರನ್ವಯ ಒಂದನೇ ಕಂತಿನ ಒಟ್ಟು ಬಿಡುಗಡೆಯ ಹಣ ರೂ.64.22 ಲಕ್ಷ ಹಣವನ್ನು ರಾಜ್ಯ ಉಸ್ತುವಾರಿ ಕೋಶಗಳಿಗೆ ಇಟ್ಟುಕೊಂಡು ಉಳಿಕೆ ಹಣ ರೂ.96.32 ಲಕ್ಷವನ್ನು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201)

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2003-2004ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕಪರಿಶೋಧನ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 250 ಪಿಬಿಎಸ್ 2003 ದಿನಾಂಕ 01-09-2003 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.61 ದಿನಾಂಕ 03.09.2003 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಕೆ. ಮೊನ್ನಪ್ಪ**

ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಡಿಆರ್‌ಡಿಎ ಆಡಳಿತ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 7 ಸ್ವಜಯೋ ಡಿಆರ್‌ಡಿಎ 03, ದಿನಾಂಕ: 8ನೇ ಸೆಪ್ಟೆಂಬರ್ 2003ಕ್ಕೆ ಅನುಬಂಧ**

| ಕ್ರ. ಸಂ. | ಜಿಲ್ಲಾಪಂಚಾಯತ್ ಹೆಸರು | ಬಿಡುಗಡೆ ಆಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ | ಒಟ್ಟು ಬಿಡುಗಡೆ (ಕೇಂದ್ರ ಮತ್ತು ರಾಜ್ಯ) | ಒಟ್ಟು ಬಿಡುಗಡೆಯ ಶೇಕಡ 10ರಷ್ಟು ರಾಜ್ಯ ಉಸ್ತುವಾರಿ ಕೋಶಕ್ಕೆ ಇಟ್ಟುಕೊಳ್ಳುತ್ತಿರುವುದು | ಬಿಡುಗಡೆಯಾದ ರಾಜ್ಯದ ಪಾಲಿನ ಹಣದಲ್ಲಿ ರಾಜ್ಯಕೋಶಕ್ಕೆ ಇಟ್ಟುಕೊಳ್ಳುವ ಹಣ ಕಡಿತಗೊಳಿಸಿ ಜಿ.ಪಂ.ಗೆ ಬಿಡುಗಡೆ ಮಾಡುತ್ತಿರುವುದು (ಕಾಲಂ 4-6) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಂಗಳೂರು ನಗರ | 15.45 | 5.15 | 20.60 | 2.06 | 3.09 |
| 2. | ಬೆಂಗಳೂರು ಗ್ರಾ | 19.15 | 6.38 | 25.53 | 2.55 | 3.83 |

| 1 | 2 | 3 | 4 | 5 | 6 | 7 |
|---|---|---|---|---|---|---|
| 3. | ಬಾಗಲಕೋಟೆ | 19.15 | 6.38 | 25.53 | 2.55 | 3.83 |
| 4. | ಬೆಳಗಾಂ | 19.15 | 6.38 | 25.53 | 2.55 | 3.83 |
| 5. | ಬಳ್ಳಾರಿ | 19.15 | 6.38 | 25.53 | 2.55 | 3.83 |
| 6. | ಬೀದರ್ | 15.46 | 5.15 | 20.61 | 2.06 | 3.09 |
| 7. | ಬಿಜಾಪುರ | 15.45 | 5.15 | 20.60 | 2.06 | 3.09 |
| 8. | ಚಾಮರಾಜನಗರ | 15.45 | 5.15 | 20.60 | 2.06 | 3.09 |
| 9. | ಚಿಕ್ಕಮಗಳೂರು | 19.14 | 6.38 | 25.52 | 2.55 | 3.83 |
| 10. | ಚಿತ್ರದುರ್ಗ | 19.14 | 6.38 | 25.52 | 2.55 | 3.83 |
| 11. | ದಾವಣಗೆರೆ | 19.14 | 6.38 | 25.52 | 2.55 | 3.83 |
| 12. | ದಕ್ಷಿಣ ಕನ್ನಡ | 15.45 | 5.15 | 20.60 | 2.06 | 3.09 |
| 13. | ಧಾರವಾಡ | 15.45 | 5.15 | 20.60 | 2.06 | 3.09 |
| 14. | ಗದಗ್ | 15.45 | 5.15 | 20.60 | 2.06 | 3.09 |
| 15. | ಗುಲ್ಬರ್ಗಾ | 19.14 | 6.38 | 25.52 | 2.56 | 3.82 |
| 16. | ಹಾಸನ | 19.14 | 6.38 | 25.52 | 2.56 | 3.82 |
| 17. | ಹಾವೇರಿ | 19.14 | 6.38 | 25.52 | 2.56 | 3.82 |
| 18. | ಕೊಡಗು | 15.45 | 5.15 | 20.60 | 2.06 | 3.09 |
| 19. | ಕೋಲಾರ | 21.83 | 7.28 | 29.11 | 2.91 | 4.37 |
| 20. | ಕೊಪ್ಪಳ | 15.45 | 5.15 | 20.60 | 2.06 | 3.09 |
| 21. | ಮಂಡ್ಯ | 19.14 | 6.38 | 25.52 | 2.56 | 3.82 |
| 22. | ಮೈಸೂರು | 19.14 | 6.38 | 25.52 | 2.55 | 3.83 |
| 23. | ರಾಯಚೂರು | 15.45 | 5.15 | 20.60 | 2.06 | 3.09 |
| 24. | ಶಿವಮೊಗ್ಗ | 19.14 | 6.38 | 25.52 | 2.55 | 3.83 |
| 25. | ತುಮಕೂರು | 19.14 | 6.38 | 25.52 | 2.55 | 3.83 |
| 26. | ಉಡುಪಿ | 15.45 | 5.16 | 20.61 | 2.06 | 3.10 |
| 27. | ಉತ್ತರಕನ್ನಡ | 21.83 | 7.28 | 29.11 | 2.91 | 4.37 |
| | **ಒಟ್ಟು** | **481.62** | **160.54** | **642.16** | **64.22** | **96.32** |

**ಎ.ಕೆ. ಮೊನ್ನಪ್ಪ**
ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

**Sub:** Release of I instalment of State share under DRDA Administration during 2003-2004 to all Zilla Panchayats-reg.

**Read:** 1. GOI Ltr. No.R-17014/10/2003-SGSY-I (Dadmin) (Sr.No.24) Dtd.13.06.2003.

**PREAMBLE:**

Government of India has released Rs. 481.62 lakhs to all Zilla Panchayats as first instalment for the year 2003-2004. Accordingly the State Government has to release Rs. 160.54 lakhs as its share; hence this order.

**Government Order No. : RDP 7 SJY (DRDA) 2003, Bangalore, Dated: 8th September 2003**

Sanction of the Government is hereby accorded for release of I instalment of Rs.160.54 lakhs (Rs. One hundred and Sixty lakhs & Fifty Four thousand only) towards Administrative Expenses to all 27 Zilla Panchayats subject to the following conditions (Annexure enclosed) :

The amount must be utilised for the implementation of Zilla Panchayat Administration as per the DRDA Administration Guidelines 99.

The funding pattern under the scheme will be 75 : 25 between the Centre and the State.

As per Para No.3.7 of DRDA Administration guidelines, 10% of the total admissible cost of all the districts of the State has to be kept for the State Cell. Accordingly Rs.64.22 lakhs (Rs. Sixty four lakhs & Twenty two thousand only) has been kept for State Monitoring Cell based on I instalment releases and Rs.96.32 lakhs (Rs. Ninety six lakhs & Thirty two thousand only) has been released to Zilla Panchayats.

The expenditure on the scheme shall be debitable to the Head of Account 2515-other Rural Development Programmes-00-196-Assistance to Zilla Panchayats-1-Zilla Panchayats-06-DRDA Administrative Charges-201-Grant-in-Aid for Zilla Panchayats (Plan) (2515-00-196-1-06-201).

The Chief Accounts Officer of all Zilla Panchayats are authorised to draw amount as per rules.

The Deputy Secretaries (Admn) of all Zilla Panchayats should submit approved annual plan for 2003-2004.

Monthly expenditure statement along with the post wise details of the staff may be sent to the Director (SEP), Rural Development and Panchayat Raj Department by 10th of every succeeding month.

The Chief Accounts Officers of all Zilla Panchayats should send audited statement of accounts and utilisation certificate to the Director (SEP), Rural Development & Panchayat Raj Dept., State Monitoring Cells have to submit utilisation certificate to the Director (SEP).

This order issues with the concurrence of the Internal Financial Advisor's Note No. RDP 250 PBS 2003 Dtd : 01-09-2003 & Receipt and Issues section Unique No. 61 Dated : 03.09.2003.

By Order and in the name of the Governor of Karnataka,

**A.K. MONNAPPA**

Director (SEP), & E/o Joint Secretary to Govt.,
Rural Development & Panchayat Raj Department.

**Annexure to Government Order No : RDP 7 SJY (DRDA) 2003, Bangalore, Dated : 8th September 2003**

**UNDER DRDA ADMINISTRATION SCHEME**

| Sl. No. | Name of the Zilla Panchayat | Central Share released | State Share being released | Total Releases | Total 10% of the Admissible Cost to be kept for State monitoring Cell (as per releases) | Balance amount released to Zilla Panchayat after deducting 10% (Col.4-6) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Bangalore (U) | 15.45 | 5.15 | 20.60 | 2.06 | 3.09 |
| 2. | Bangalore (R) | 19.15 | 6.38 | 25.53 | 2.55 | 3.83 |
| 3. | Bagalkot | 19.15 | 6.38 | 25.53 | 2.55 | 3.83 |
| 4. | Belgaum | 19.15 | 6.38 | 25.53 | 2.55 | 3.83 |
| 5. | Bellary | 19.15 | 6.38 | 25.53 | 2.55 | 3.83 |
| 6. | Bidar | 15.46 | 5.15 | 20.61 | 2.06 | 3.09 |
| 7. | Bijapur | 15.45 | 5.15 | 20.60 | 2.06 | 3.09 |
| 8. | Chamarajanagar | 15.45 | 5.15 | 20.60 | 2.06 | 3.09 |
| 9. | Chickmagalur | 19.14 | 6.38 | 25.52 | 2.55 | 3.83 |
| 10. | Chitradurga | 19.14 | 6.38 | 25.52 | 2.55 | 3.83 |
| 11. | Davanagere | 19.14 | 6.38 | 25.52 | 2.55 | 3.83 |
| 12. | D.Kannada | 15.45 | 5.15 | 20.60 | 2.06 | 3.09 |
| 13. | Dharwad | 15.45 | 5.15 | 20.60 | 2.06 | 3.09 |
| 14. | Gadag | 15.45 | 5.15 | 20.60 | 2.06 | 3.09 |
| 15. | Gulbarga | 19.14 | 6.38 | 25.52 | 2.56 | 3.82 |
| 16. | Hassan | 19.14 | 6.38 | 25.52 | 2.56 | 3.82 |
| 17. | Haveri | 19.14 | 6.38 | 25.52 | 2.56 | 3.82 |
| 18. | Kodagu | 15.45 | 5.15 | 20.60 | 2.06 | 3.09 |
| 19. | Kolar | 21.83 | 7.28 | 29.11 | 2.91 | 4.37 |
| 20. | Koppal | 15.45 | 5.15 | 20.60 | 2.06 | 3.09 |
| 21. | Mandya | 19.14 | 6.38 | 25.52 | 2.56 | 3.82 |
| 22. | Mysore | 19.14 | 6.38 | 25.52 | 2.55 | 3.83 |
| 23. | Raichur | 15.45 | 5.15 | 20.60 | 2.06 | 3.09 |
| 24. | Shimoga | 19.14 | 6.38 | 25.52 | 2.55 | 3.83 |
| 25. | Tumkur | 19.14 | 6.38 | 25.52 | 2.55 | 3.83 |
| 26. | Udupi | 15.45 | 5.16 | 20.61 | 2.06 | 3.10 |
| 27. | U.Kannada | 21.83 | 7.28 | 29.11 | 2.91 | 4.37 |
| | **Total** | **481.62** | **160.54** | **642.16** | **64.22** | **96.32** |

**A.K. MONNAPPA**

Director (SEP), & E/o Joint Secretary to Govt.,
Rural Development & Panchayat Raj Department.

P.R. 1169

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಯಾದಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ಪಿಡಿ 309 ಪಿಟಿಪಿ 94, ದಿನಾಂಕ: 7-8-1995.
2. ಸರ್ಕಾರಿ ಆದೇಶ ಸಂಖ್ಯೆ.ಪಿಡಿ 309 ಪಿಟಿಪಿ 94, ದಿನಾಂಕ: 16-3-1996.
3. ಸರ್ಕಾರಿ ಆದೇಶ ಸಂಖ್ಯೆ.ಯೋಇ 578 ಯೋವಿವಿ 99, ದಿನಾಂಕ: 4-1-2000.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 7-8-1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮವನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಸಮಿತಿಗಳನ್ನು ಪುನರಚಿಸಲಾಗಿರುತ್ತದೆ. ಈ ಆದೇಶದಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 16-3-96ರ ಸರ್ಕಾರಿ ಆದೇಶದಲ್ಲಿ ಪುನರಚಿಸಲಾಗಿರುತ್ತದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ 4-1-2000ದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮಗಳು ಸೇರಿದಂತೆ) ಅನುಷ್ಠಾನಗೊಳಿಸಲು ರಚಿಸಲಾದ ಜಿಲ್ಲಾ ಮಟ್ಟದ, ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ವಿವಿಧ ಸರ್ಕಾರಿ ಆದೇಶಗಳಲ್ಲಿ ನಾಮನಿರ್ದೇಶನಗೊಂಡ ಎಲ್ಲಾ ಅಧಿಕಾರೇತರ ಸದಸ್ಯರುಗಳ ನಾಮನಿರ್ದೇಶನವನ್ನು ರದ್ದುಪಡಿಸಲಾಗಿರುತ್ತದೆ.

ಈಗ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಯಾದಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ.ಯೋಇ 222 ಯೋವಿವಿ 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003

ಸರ್ಕಾರಿ ಆದೇಶ ಸಂಖ್ಯೆ.ಪಿಡಿ 309 ಪಿಟಿಪಿ 94, ದಿನಾಂಕ 16-3-1996ರಲ್ಲಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ಪುನರ್‌ರಚಿಸಲಾಗಿರುವುದರಿಂದ ಯಾದಗಿರಿ ತಾಲ್ಲೂಕು ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮವನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ವ್ಯಕ್ತಿಗಳನ್ನು ಯಾದಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

1) ಶ್ರೀ ವೀರಪ್ಪ, ಖಾನಳ್ಳಿ ಗ್ರಾಮ, ಯಾದಗಿರಿ ತಾಲ್ಲೂಕು.
2) ಶ್ರೀ ಶರಣಪ್ಪ ದಳಪತಿ, ಶೆಟ್ಟಿಗೇರು ಗ್ರಾಮ, ಯಾದಗಿರಿ ತಾಲ್ಲೂಕು.
3) ಶ್ರೀ ಶರಣಪ್ಪ ಸಾಹು, ಅಶ್ನಾಳ ಗ್ರಾಮ, ಯಾದಗಿರಿ ತಾಲ್ಲೂಕು.
4) ಶ್ರೀ ಹನುಮಂತಪ್ಪ ಶೀಲವಂತ, ಯಾದಗಿರಿ.
5) ಶ್ರೀ ಬಾಲೇಸಾಬ್ ಅನಪೂರ್, ಯಾದಗಿರಿ.
6) ಶ್ರೀಮತಿ ಅನಿತಾ ಶಾಮಸುಂದರ್, ಯಾದಗಿರಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1170

**ಬಿ.ಕೆ. ಶ್ರೀನಿವಾಸರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-1, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಬಂಡವಾಳ ಹಿಂತೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಸಚಿವಾಲಯ

**ವಿಷಯ:** ಎನ್.ಜಿ.ಇ.ಎಫ್. ಸಂಸ್ಥೆಯ ಮಾಸಿಕ ಶೇ 80 ರಷ್ಟು ಸ್ವಯಂ ನಿವೃತ್ತಿ ಯೋಜನೆಯ ಉದ್ಯೋಗಿಗಳಿಗೆ ಓ.ಟಿ.ಎಸ್.ನಡಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಎನ್.ಜಿ.ಇ.ಎಫ್.ನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಎಂ.ಡಿ/029/2003 ದಿನಾಂಕ 23-06-2003.
2. ಸರ್ಕಾರದ ಆದೇಶ ಸಂಖ್ಯೆ: ಡಿಡಿಪಿಇಆರ್:43:ಎಆರ್‌ಯು:2002, ಬೆಂಗಳೂರು ದಿನಾಂಕ 23-6-2003 ರಲ್ಲಿ 3.02 ಕೋಟಿ ರೂ. ಗಳ ಬಿಡುಗಡೆ ಆದೇಶ.

ಎನ್.ಜಿ.ಇ.ಎಫ್. ಸಂಸ್ಥೆಯನ್ನು 1996ರಲ್ಲಿ ಬಿಐಎಫ್‌ಆರ್ ಸಂಸ್ಥೆಯು SICA ಉಪಬಂಧಗಳ ಅಡಿಯಲ್ಲಿ ರೋಗಗ್ರಸ್ಥ ಕಂಪನಿಯೆಂದು ಘೋಷಿಸಿ ಪುನಶ್ಚೇತನ ಕಾರ್ಯಕ್ರಮಕ್ಕೆ ಸಮ್ಮತಿಸಿತು. ಪುನಶ್ಚೇತನದ ಸಮಗ್ರ ಪ್ರಸ್ತಾವಕ್ಕೆ ಅವಶ್ಯಕ ಹಣಕಾಸು ಹೂಡಿಕೆಯನ್ನು ಪ್ರಾಥಮಿಕವಾಗಿ ಹೆಚ್ಚುವರಿ ಆಸ್ತಿಗಳ ಮಾರಾಟದಿಂದ ಮತ್ತು ಬಂಡವಾಳಗಳಿಂದ ಹೂಡಬಹುದೆಂದು ನಿರೀಕ್ಷಿಸಲಾಯಿತು.

ಪುನಶ್ಚೇತನ ಕಾರ್ಯಕ್ರಮವನ್ನು ಒಪ್ಪುವ ಹಂತದಲ್ಲಿ 1806 ಕಾರ್ಮಿಕರು ಹೆಚ್ಚುವರಿ ಇದ್ದಾರೆಂದು ಗುರುತಿಸಿದ್ದು ಇವರುಗಳನ್ನು ಸ್ವಯಂ ನಿವೃತ್ತಿ ಯೋಜನೆಯ ಮೂಲಕ ಕಡಿಮೆ ಮಾಡಲು ನಿರ್ಧರಿಸಲಾಯಿತು. ಹೆಚ್ಚುವರಿ ಆಸ್ತಿ ವಿಲೇವಾರಿ ಮಾಡಿ ಪುನಶ್ಚೇತನ ಕಾರ್ಯಕ್ರಮ ಅನುಷ್ಠಾನಗೊಳಿಸಲು ನಿರ್ಧರಿಸಲಾಯಿತು ಪುನಶ್ಚೇತನ ಯೋಜನೆಯ ರೂಪುರೇಷೆಗಳಂತೆ ಮಾನವ ಸಂಪನ್ಮೂಲಗಳನ್ನು ಕಡಿಮೆಗೊಳಿಸುವ ಬಗ್ಗೆ ಎನ್.ಜಿ.ಇ.ಎಫ್‌ನ ಆಡಳಿತ ಮಂಡಳಿಯು 4-11-1995ರಲ್ಲಿ ಸ್ವಯಂ ನಿವೃತ್ತಿ ಯೋಜನೆಯೊಂದಿಗೆ ಒಪ್ಪಿಗೆ ನೀಡಿತು. ಈ ಯೋಜನೆಯ ಪ್ರಕಾರ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ನೀಡಲಾಗುವುದು ಮತ್ತು ಇವರುಗಳಿಗೆ ಮೂಲ ವೇತನ+ಪಿಪಿI +ತುಟ್ಟಿಭತ್ಯೆ ಇವುಗಳ ಪ್ರತಿಶತ 80 ರಷ್ಟನ್ನು ಮಾಸಿಕವಾಗಿ ವಯೋ ನಿವೃತ್ತಿಯಾಗುವವರೆಗೆ ಅಥವಾ 13 ವರ್ಷ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೀಡಲಾಗುವುದು 1996 ರಿಂದ 2000ರವರೆಗೆ ಈ ಯೋಜನೆಯಡಿ 2127 ಉದ್ಯೋಗಿಗಳು ಸ್ವಯಂ ನಿವೃತ್ತಿ ಹೊಂದಿದ್ದಾರೆ.

ಪುನಶ್ಚೇತನ ಯೋಜನೆ ಪ್ರಕಾರ ಸಂಸ್ಥೆಯ ಪುನಶ್ಚೇತನ ಪ್ರಸ್ತಾಪದ ಅನುಷ್ಠಾನಕ್ಕೆ ಕಷ್ಟವಾಯಿತು. ಇದೇ ಸಮಯದಲ್ಲಿ ಕಂಪನಿಯು ಈ ಸ್ವಯಂ ನಿವೃತ್ತಿ ಯೋಜನೆಯ ಉದ್ಯೋಗಿಗಳಿಗೆ ಮಾಸಿಕ ಪರಿಹಾರವನ್ನು ನೀಡುವಲ್ಲಿ ತನ್ನ ಬದ್ದತೆಯನ್ನು ಉಳಿಸಿಕೊಳ್ಳುವಲ್ಲಿ ಅಸಮರ್ಥವಾಯಿತು.

ಎನ್.ಜಿ.ಇ.ಎಫ್ ಸಂಸ್ಥೆಯು ಸರ್ಕಾರವನ್ನು ಸಂಪರ್ಕಿಸಿ ಕಂಪನಿ ಈಗಾಗಲೇ ಮುಚ್ಚಲ್ಪಟ್ಟಿರುವುದರಿಂದ ಮಾಸಿಕ ಸ್ವಯಂ ನಿವೃತ್ತಿ ಯೋಜನೆಯ ಉದ್ಯೋಗಿಗಳಿಗೆ ಮಾಸಿಕ ಪರಿಹಾರವಾದ ರೂ. 85 ಲಕ್ಷಗಳನ್ನು ನೀಡಲು ಹಣವಿರುವುದಿಲ್ಲವೆಂದು ಮತ್ತು ಉಳಿದಿರುವ 1500 ಈ ರೀತಿಯ ಉದ್ಯೋಗಿಗಳಿಗೆ ಮಾಸಿಕವಾಗಿ ಹಣ ಪಾವತಿಸಲು ಮೂಲಭೂತ ಸೌಕರ್ಯಗಳು ಇಲ್ಲವೆಂದು ಹೇಳಿದ್ದರು. ಹಾಗಾಗಿ ಹಲವಾರು ಬಾರಿ ಸರ್ಕಾರವೇ ಮಾಸಿಕ ಪರಿಹಾರ ಭತ್ಯೆಯನ್ನು ನೀಡಲು ಹಣಕಾಸು ನೆರವನ್ನು ಒದಗಿಸಿದ್ದಿತು. ಈ ಕ್ರಮ ಕೈಗೊಳ್ಳುವಲ್ಲಿ ಸಾಮಾನ್ಯವಾಗಿ ವಿಳಂಬವಾಗುತ್ತಿದ್ದು ಈ ಮಾಜಿ ನೌಕರರುಗಳು ಅನವಶ್ಯಕ ಕಷ್ಟವನ್ನು ಅನುಭವಿಸುತ್ತಿದ್ದಾರೆಂದು ಸಂಸ್ಥೆಯು ಮುಂದಿನ ಸ್ವಯಂ ನಿವೃತ್ತಿ ಯೋಜನೆಯ ಹಣವನ್ನು ಒಮ್ಮತ್ತದ ಒಡಂಬಡಿಕೆ (ಓ.ಟಿ.ಎಸ್) ಯಡಿ ಶೇ. 8ರ ಕಡಿತದಲ್ಲಿ NPV (Net Present Value) ಮೇರೆಗೆ ನೀಡಲು ಪ್ರಸ್ತಾವನೆಯೊಂದನ್ನು ನೀಡಿದ್ದಾರೆ. ಸದರಿ ಪ್ರಸ್ತಾವನೆಯನ್ನು ವಿವಿಧ ಹಂತಗಳಲ್ಲಿ ಪರಿಶೀಲಿಸಿದ ನಂತರ ಸರ್ಕಾರವು ಎನ್.ಜಿ.ಇ.ಎಫ್ ಸಂಸ್ಥೆಯ ಮಾಸಿಕ ಶೇ. 80ರ ಸ್ವಯಂ ನಿವೃತ್ತಿ ಯೋಜನೆಯ ಉದ್ಯೋಗಿಗಳಿಗೆ ಶೇ. 8ರ ಕಡಿತದೊಂದಿಗೆ ರೂ. 30.06 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ವ್ಯವಸ್ಥಾಪಕ ನಿರ್ದೇಶಕರು ತಮ್ಮ ಪತ್ರದಲ್ಲಿ ಕೋರಿರುತ್ತಾರೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಡಿಡಿಪಿಇಆರ್ 43 ಎಆರ್‌ಯು 2002, ದಿನಾಂಕ: 3ನೇ ಸೆಪ್ಟೆಂಬರ್ 2003**

ಸರ್ಕಾರವು ಎನ್.ಜಿ.ಇ.ಎಫ್ ಸಂಸ್ಥೆಯ ಮಾಸಿಕ ಶೇ. 80ರ ಸ್ವಯಂ ನಿವೃತ್ತಿ ಯೋಜನೆಯ ಉದ್ಯೋಗಿಗಳಿಗೆ ಜೂನ್ 2003ರಿಂದ ಅನ್ವಯವಾಗುವಂತೆ ಓ.ಟಿ.ಎಸ್.ನಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ರೂ. 30.06 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ಆದೇಶಿಸಿದೆ.

**ಷರತ್ತುಗಳು**

1. ಈ ಸಾಲವನ್ನು ಸಂಸ್ಥೆಯ ಸಮಾಪನ ಕಾಲಕ್ಕೆ ಆಸ್ತಿ ವಿಲೇವಾರಿಯಿಂದ ಬಂದ ಹಣದಲ್ಲಿ ಸರ್ಕಾರಕ್ಕೆ ಆದ್ಯತೆ ಮೇಲೆ ವಾಪಸ್ಸು ಮಾಡತಕ್ಕದ್ದು.
2. ಎನ್.ಜಿ.ಇ.ಎಫ್. ಮತ್ತು ನೌಕರರ ನಡುವೆ 01-04-1996ರ ಒಡಂಬಡಿಕೆಯ ಪ್ರಕಾರ ಈಗ ನೀಡುವ ಪಾವತಿಗೆ ಸಂಪೂರ್ಣವಾಗಿ ಬದ್ಧರಾಗಿರತಕ್ಕದ್ದು. ಈ ಒಡಂಬಡಿಕೆಯನ್ನು ಮೀರಿ ಯಾವುದೇ ಕ್ಲೇಮ್‌ಗಳನ್ನು ಒಪ್ಪಬಾರದು.
3. ಎನ್.ಜಿ.ಇ.ಎಫ್. ಸಂಸ್ಥೆಯು ಸ್ವಯಂ ನಿವೃತ್ತಿ ಯೋಜನೆಯ ಲೆಕ್ಕಾಚಾರಗಳು ಆ ಒಡಂಬಡಿಕೆಯಲ್ಲಿ ಕಾಣಿಸಲಾದ ನಿಬಂಧನೆಗಳ ಪ್ರಕಾರವೇ ಇರುತ್ತದೆಂದು ಮತ್ತು 2003ರ ಮೇ ವರೆಗೆ ಎಲ್ಲಾ ಪಾವತಿಗಳನ್ನು ಮಾಡಲಾಗಿದೆ ಎಂದು ದೃಢೀಕರಿಸತಕ್ಕದ್ದು.
4. ವಯೋನಿವೃತ್ತಿಯ ಸಮಯದಲ್ಲಿ ಪಾವತಿಸಬೇಕಾದ ಮೊತ್ತವನ್ನು ಶೇ. 8ರ ಕಡಿತದಲ್ಲಿ ಲೆಕ್ಕಾಚಾರ ಹಾಕುವುದು ಮತ್ತು ಸಂಸ್ಥೆಯ ಆಸ್ತಿಗಳ ವಿಲೇವಾರಿಯಿಂದ ಬಂದ ಹಣದಲ್ಲಿಯೇ ಇದನ್ನು ಸರಿದೂಗಿಸುವುದು.
5. ಮೇಲಿನ ಒಡಂಬಡಿಕೆಯ ಪ್ರಕಾರ ಪ್ರಯಾಣದ ಭತ್ಯೆಗಳನ್ನು ನೀಡಿದ್ದರೆ, ಅದನ್ನು ಕಡಿತ ಮಾಡತಕ್ಕದ್ದು.
6. ಎನ್.ಜಿ.ಇ.ಎಫ್ ಸಂಸ್ಥೆಯು ಉಳಿದ ಸಾಲ, ಮುಂಗಡಗಳನ್ನು ಈ ಹಣ ಪಾವತಿಯಿಂದಲೇ ಕಡಿತಗೊಳಿಸಲಾಗುವುದೆಂದು ಪ್ರಮಾಣೀಕರಿಸತಕ್ಕದ್ದು.
7. ಒಟ್ಟು ಮೊತ್ತವನ್ನು ಒಂದೇ ಬಾರಿ ಪಾವತಿ ಮಾಡಿದಲ್ಲಿ ಆದಾಯ ತೆರಿಗೆ ಪಾವತಿಸಬೇಕಾಗುವುದೇ ಎಂಬ ಹೊಣೆಗಾರಿಕೆಯನ್ನು ನಿರ್ಧರಿಸಿ ಅದನ್ನು ಮೂಲದಲ್ಲಿಯೇ ಕಡಿತಗೊಳಿಸತಕ್ಕದ್ದು.
8. ಎಲ್ಲಾ ಫಲಾನುಭವಿಗಳಿಂದ ಎಲ್ಲಾ ಷರತ್ತುಗಳಿಗೆ ಬೇಷರತ್ ಒಪ್ಪಿಗೆ ಪಡೆಯುವ ಬಗ್ಗೆ ಹೊಸ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.
9. ಹಣ ಪಾವತಿಸುವ ಮುಂಚೆ ಎಲ್ಲಾ ಉದ್ಯೋಗಿಗಳ ವೈಯಕ್ತಿಕ ಪಾವತಿ ಲೆಕ್ಕಾಚಾರಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆ ವತಿಯಿಂದ ಘಟನಾಪೂರ್ವ (Pre-Audit) ಲೆಕ್ಕ ತನಿಖೆ ಮಾಡಿಸತಕ್ಕದ್ದು.

ಇದು ಈ ವಿಷಯದ ಬಗ್ಗೆ ಸಂಪೂರ್ಣ ಹಾಗೂ ಅಂತಿಮ ವ್ಯವಸ್ಥೆಯಾಗಿರುತ್ತದೆ.

ಎಲ್ಲಾ ಷರತ್ತುಗಳನ್ನು ಪಾಲಿಸುವುದು ಸಂಸ್ಥೆಯ ಮುಖ್ಯಕಾರ್ಯನಿರ್ವಾಹಕರ ಜವಾಬ್ದಾರಿಯಾಗಿರುತ್ತದೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ. 2316 ವೆಚ್ಚ I/2002 ದಿನಾಂಕ 26-05-2003 ಮತ್ತು ಎಫ್.ಡಿ. 965 ವೆಚ್ಚ-I 2003 ದಿನಾಂಕ 6-6-2003ರುಗಳ ಪ್ರಕಾರ, ಆರ್ಥಿಕ ಇಲಾಖೆಯ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 6852-02-190-4-02 (ಯೋಜನೇತರ) ದಲ್ಲಿ ಪ್ರಸಕ್ತ ವರ್ಷಕ್ಕೆ ಬಿಡುಗಡೆಗಾಗಿ ವ್ಯವಸ್ಥೆ ಮಾಡಲಾಗಿರುವ ರೂ. 9000 (ಒಂಬತ್ತು ಸಾವಿರ) ಲಕ್ಷಗಳಿಂದ ಭರಿಸತಕ್ಕದ್ದು.

ಈ ಹಣವನ್ನು ವ್ಯವಸ್ಥಾಪಕ ನಿರ್ದೇಶಕರು ಎನ್.ಜಿ.ಇ.ಎಫ್, ಬೆಂಗಳೂರುರವರು ಆಯುಕ್ತರು ಕೈಗಾರಿಕಾ ಅಭಿವೃದ್ಧಿ ಮತ್ತು ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಮೇಲು ಸಹಿಯೊಂದಿಗೆ ಪಡೆಯತಕ್ಕದ್ದು. ಮೇಲಿನ 30.06 ಕೋಟಿ ರೂ.ಗಳನ್ನು ಸಾಲವೆಂದು ಆರ್ಥಿಕ ಇಲಾಖೆಯು ವಿಧಿಸುವ ನಿಬಂಧನೆಗಳಿಗೊಳಪಟ್ಟು ಎನ್.ಜಿ.ಇ.ಎಫ್.ಗೆ ಒಮ್ಮತ್ತದ ಒಡಂಬಡಿಕೆಗೆ (ಓ.ಟಿ.ಎಸ್)ಗಾಗಿ ಹಣ ಬಿಡುಗಡೆಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ವಿಶ್ವನಾಥ್**

ಜಂಟಿ ನಿರ್ದೇಶಕರು (ಡಬ್ಲ್ಯೂಪಿ) ಹಾಗೂ

ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಡಿಡಿಪಿಇಆರ್.

ಪಿ.ಆರ್. 1173

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಕಲ್ಯಾಣರಾವ್ ಎಸ್. ಯರ್ನಳ್ಳಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ 1.2.2002ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ:357:ಪಿಡಬ್ಲ್ಯುಸಿ:90 ದಿನಾಂಕ: 2.12.94.
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ:8:ಪಿಡಬ್ಲ್ಯುಸಿ:2000, ದಿನಾಂಕ: 2.2.2000.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್-235:ಇಎಸ್‌ಎಂ:ದಿನೌಸೇ:2002-03: ದಿ:19.5.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ:29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯುಡಿ 8:ಪಿಡಬ್ಲ್ಯುಸಿ 2000 ದಿನಾಂಕ: 2.2.2000ದ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

### ಆದೇಶ

### ಸರ್ಕಾರಿ ಆದೇಶ ಸಂಖ್ಯೆ: ಲೋಇ 33 ಪಿಡಬ್ಲ್ಯುಸಿ 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94 ಹಾಗೂ ಪಿಡಬ್ಲ್ಯುಡಿ 8 ಪಿಡಬ್ಲ್ಯುಸಿ 2000 ದಿನಾಂಕ 2.2.2000ದ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಕಲ್ಯಾಣರಾವ್ ಎಸ್. ಯರ್ನಳ್ಳಿ, ಪದವೀಧರ ಇಂಜಿನಿಯರ್ | 1.2.1992 | 31.1.2002 | 1.2.2002 | ಲೋಇ ಉಪ ವಿಭಾಗ, ಮಧುಗಿರಿ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1185

**ಎನ್.ವೈ. ಸಾಗರ್**

ಪೀಠಾಧಿಕಾರಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ)

## ಕಾನೂನು ಸಚಿವಾಲಯ

**ವಿಷಯ:** ಶ್ರೀಮತಿ ಕೆ.ಆರ್. ಭಾರತಿ, ಹಿರಿಯ ಸಹಾಯಕಿ, ಅಭಿಪ್ರಾಯ ಶಾಖೆ, ಕಾನೂನು ಇಲಾಖೆ ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 226:227 ಎಲ್ಎಎಂ 2001, ದಿನಾಂಕ:27-2-2002.
2. ದಿನಾಂಕ:4-6-2002ರ ಸರ್ಕಾರಿ ಆದೇಶ ಸಂ:ಲಾ 226 ಎಲ್ಎಎಂ 2001.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 12 ರನ್ವಯ ಶ್ರೀಮತಿ ಕೆ.ಆರ್. ಭಾರತಿ, ಹಿರಿಯ ಸಹಾಯಕಿ ಅಭಿಪ್ರಾಯ ಶಾಖೆ (ಹಿಂದಿನ ವ್ಯಾಜ್ಯ-5 ಶಾಖೆ) ಕಾನೂನು ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಪ್ರಸ್ತಾಪಿಸಲಾಗಿದ್ದು, ಸದರಿಯವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣಾ ಹೇಳಿಕೆಯನ್ನು ನೀಡಿರುವುದಿಲ್ಲ, ಆದ್ದರಿಂದ, ಅವರ ಉತ್ತರ ಏನೂ ಇಲ್ಲ ಎಂದು ಪರಿಭಾವಿಸಿ ಮೇಲ್ಕಂಡ ಸದರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸುತ್ತಾ, ಮೇಲೆ (2)ರಲ್ಲಿ ಓದಲಾದ ದಿನಾಂಕ:4-6-2002ರ ಆದೇಶದಲ್ಲಿ ಶ್ರೀಮತಿ ಖಾಜಿ ಜಯಬುನ್ನೀಸಾ ಮೋಹಿಯುದ್ದೀನ್, ಸರ್ಕಾರದ ಅಧೀನ ಕಾರ್ಯದರ್ಶಿ, ವ್ಯಾಜ್ಯ-2 ಕಾನೂನು ಇಲಾಖೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿಯು ಮತ್ತು ಶ್ರೀ ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ, ಶಾಖಾಧಿಕಾರಿ, ಆಡಳಿತ-2, ಕಾನೂನು ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿತ್ತು. ಈಗ ಈ ಇಬ್ಬರೂ ಅಧಿಕಾರಿಗಳು ಕಾನೂನು ಇಲಾಖೆಯಿಂದ ವರ್ಗಾವಣೆಯಾಗಿರುವ ಪ್ರಯುಕ್ತ ಪ್ರಸ್ತುತ ಇಲಾಖಾ ವಿಚಾರಣೆಯನ್ನು ನಡೆಸಲು ನೂತನವಾಗಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಲಾ 226 ಎಲ್ಎಎಂ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2003

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಕೆ.ಆರ್. ಭಾರತಿ, ಹಿರಿಯ ಸಹಾಯಕಿ, ಅಭಿಪ್ರಾಯ ಶಾಖೆ, ಕಾನೂನು ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಕೆ.ಬಿ. ಮತ್ತೂರ್, ಸರ್ಕಾರದ ಅಧೀನ ಕಾರ್ಯದರ್ಶಿ, (ವ್ಯಾಜ್ಯ-1) ಕಾನೂನು ಇಲಾಖೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶ್ರೀ ಕೆ.ಎಸ್. ಶ್ರೀಧರ್, ಶಾಖಾಧಿಕಾರಿ, ಆಡಳಿತ-2, ಕಾನೂನು ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1186

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಆಯವ್ಯಯ ಭಾಷಣ 2003-04ರ ಪ್ಯಾರ 23 ಮತ್ತು 25ರ ಅನುಷ್ಠಾನ - ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಸಹಾಯಧನ.

**ಓದಲಾಗಿದೆ:**
1. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ:ಆರ್‌ಡಿಪಿ:ಸತೋಅ:2:2003-04 ದಿನಾಂಕ: 24.5.2003 ಮತ್ತು 21-8-2003.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ:ಆರ್‌ಡಿಪಿ:ಸತೋಅ.(1)ಎ:2003-04 ದಿನಾಂಕ: 8.9.2003 ಮತ್ತು 10-9-2003.

**ಪ್ರಸ್ತಾವನೆ:**

ತೋಟಗಾರಿಕೆಯನ್ನು ಅವಲಂಬಿಸಿದ ರಾಜ್ಯದ ರೈತರಿಗೆ ಹನಿನೀರಾವರಿ ಪದ್ಧತಿಯು ವರದಾನವಾಗಿ ಪರಿಣಮಿಸಿದೆ. ಹನಿ ನೀರಾವರಿ ಪದ್ಧತಿಯು ಸಮರ್ಥ ಹಾಗೂ ನೀರಿನ ಮಿತ ಬಳಕೆ ಪದ್ಧತಿಯಾಗಿದೆ. ಇದರಿಂದಾಗಿ ತೋಟಗಾರಿಕೆ ಉತ್ಪಾದನೆಯಲ್ಲಿ ಹೆಚ್ಚಳ, ಪದಾರ್ಥಗಳ ಗುಣಮಟ್ಟ ಸುಧಾರಣೆ, ಕಳೆ ನಿಯಂತ್ರಣ, ಕೂಲಿ ವೆಚ್ಚದಲ್ಲಿ ಮಿತವ್ಯಯ ಹಾಗೂ ವಿದ್ಯುತ್ ಬೇಡಿಕೆಯಲ್ಲಿ ಮಿತವ್ಯಯ ಸಾಧಿಸಲು ಸಾಧ್ಯವಾಗಿದೆ.

ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಸಹಾಯಧನವನ್ನು ಹೆಚ್ಚಿನ ಪ್ರಮಾಣದಲ್ಲಿ ಒದಗಿಸಲು 2003-04ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆ ಮಾಡಲಾಗಿದೆ. ಈ ಅನ್ವಯ ಬಿಜಾಪುರ ಜಿಲ್ಲೆಯಲ್ಲಿ ಎಲ್ಲಾ ವರ್ಗದ ರೈತರಿಗೆ ಮತ್ತು ರಾಜ್ಯಾದ್ಯಂತ ಗಂಗಾ ಕಲ್ಯಾಣ ಯೋಜನೆ ಫಲಾನುಭವಿಗಳಿಗೆ ಶೇಕಡ 100 ರಷ್ಟು ಸಹಾಯಧನ ಹಾಗೂ ರಾಜ್ಯಾದ್ಯಂತ ಇತರೆ ಜಿಲ್ಲೆಗಳ ರೈತರಿಗೆ ಶೇಕಡ 50 ರಷ್ಟು ಸಹಾಯಧನ ಒದಗಿಸಬೇಕಾಗಿದೆ. ಪರಗೋಡು ಪ್ರಕರಣದ ಹಿನ್ನಲೆಯಲ್ಲಿ ಕೋಲಾರ ಜಿಲ್ಲೆಗೂ ಸಹ ಶೇಕಡ 100 ರಷ್ಟು ಸಹಾಯಧನ ನೀಡಲು ತೀರ್ಮಾನಿಸಲಾಗಿದೆ.

2003-04ನೇ ಸಾಲಿನ ಆಯವ್ಯಯದಡಿ ತೋಟಗಾರಿಕೆ ಇಲಾಖೆಗೆ 2401-00-108-2-30-059 ಲೆಕ್ಕ ಶೀರ್ಷಿಕೆಯಡಿ ಲಭ್ಯವಿರುವ 500 ಲಕ್ಷ ರೂ.ಗಳನ್ನು ಹಾಗೂ ಕೃಷಿ ಇಲಾಖೆಗೆ ಲೆಕ್ಕ ಶೀರ್ಷಿಕೆ 2401-00-108-1-14-059 ಯಲ್ಲಿ ಒದಗಿಸಿರುವ ಅನುದಾನದಲ್ಲಿ ಹೆಚ್ಚುವರಿ 500 ಲಕ್ಷ ರೂ.ಗಳನ್ನು ಈ ಉದ್ದೇಶಕ್ಕಾಗಿ ಬಳಸಲು ಒಟ್ಟಾರೆ 1000 ಲಕ್ಷ ರೂ.ಗಳ ಯೋಜನೆಯನ್ನು ಮೇಲೆ ಓದಲಾದ ಪತ್ರಗಳಲ್ಲಿ ತೋಟಗಾರಿಕೆ ನಿರ್ದೇಶಕರು ರೂಪಿಸಿರುತ್ತಾರೆ.

ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಹಾಗೂ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಮಂಡಿಸಿದ್ದು, ಪ್ರಸ್ತಾವನೆಗೆ ಯೋಜನಾ ಇಲಾಖೆ ಅನುಮೋದಿಸಿದ್ದು ವಾರ್ಷಿಕ ವಿತ್ತ ನಿರೂಪಣೆ (ಆಯವ್ಯಯ) 2003-2004ರಲ್ಲಿ ಲೆಕ್ಕಶೀರ್ಷಿಕೆ 2401-00-108-2-30-059ರಲ್ಲಿ ಹನಿನೀರಾವರಿ (ತೋಟಗಾರಿಕೆ) ಕಾರ್ಯಕ್ರಮಕ್ಕಾಗಿ ಲಭ್ಯವಿರುವ ರೂ.500 ಲಕ್ಷಗಳನ್ನು ಹಾಗೂ ಲೆಕ್ಕಶೀರ್ಷಿಕೆ 2401-00-108-1-14-059ರಲ್ಲಿ ಹನಿನೀರಾವರಿ (ಕೃಷಿ) ಕಾರ್ಯಕ್ರಮಕ್ಕಾಗಿ ಲಭ್ಯವಿರುವ ಅನುದಾನದಲ್ಲಿ ರೂ.500 ಲಕ್ಷಗಳನ್ನು ಎಂದರೆ ಒಟ್ಟಾರೆ ರೂ.1000 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2401-00-108-2-30ಗೆ ಮರುಹೊಂದಾಣಿಕೆ ಮಾಡಿಕೊಳ್ಳಲು ಆರ್ಥಿಕ ಇಲಾಖೆಯು ಅನುಮತಿಸಿರುತ್ತದೆ.

ಮೇಲೆ ಓದಲಾದ ಪತ್ರಗಳಲ್ಲಿ ತೋಟಗಾರಿಕೆ ನಿರ್ದೇಶಕರು ಸಂಪೂರ್ಣವಾಗಿ ರಾಜ್ಯದ ಅನುದಾನವನ್ನು ಬಳಸಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಬೇಕಾಗಿರುವುದರಿಂದ ಕೆ.ಟಿ.ಪಿ.ಪಿ. ನಿಯಮಾನುಸಾರ ಕ್ರಮ ತೆಗೆದುಕೊಂಡು ಅತಿ ಕಡಿಮೆ ದರ ನಮೂದಿಸಿರುವ ಕಂಪನಿಯನ್ನು ಗುರುತಿಸಿರುತ್ತಾರೆ. ಅತ್ಯಂತ ಕಡಿಮೆ ದರ ನೀಡಿರುವ ಕಂಪನಿಯ ವಿವರಗಳನ್ನು ತೋಟಗಾರಿಕೆ ನಿರ್ದೇಶಕರು ಸಲ್ಲಿಸಿದ್ದು ಈ ಮಾನದಂಡದ ಆಧಾರದ ಮೇರೆಗೆ ವಿವಿಧ ಬೆಳೆ ಅಂತರಗಳಿಗೆ ತಗುಲಬಹುದಾದ ವೆಚ್ಚಗಳನ್ನು ಪ್ರಕಟಿಸುವುದಾಗಿ ತಿಳಿಸುತ್ತಾ ರೈತರ ತೋಟಗಳಲ್ಲಿ ಹನಿ ನೀರಾವರಿ ಅಳವಡಿಸಲು ಒಂದೇ ಕಂಪನಿಗೆ ಅನುಮೋದನೆ ನೀಡಿದಲ್ಲಿ ರೈತರಿಗೆ ಹೆಚ್ಚಿನ ಆಯ್ಕೆಯ ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆದುದರಿಂದ ಕಡಿಮೆ ದರಕ್ಕಿಂತ ಹೆಚ್ಚಿನ ದರ ನೀಡಿದ ವಿವಿಧ ಟೆಂಡರ್‌ದಾರರ ದರಗಳನ್ನು ಸಹ ಅನುಮೋದಿಸಿ ಕಂಪನಿಯ ಆಯ್ಕೆಯನ್ನು ರೈತರ ಸ್ವತಂತ್ರಕ್ಕೆ ಬಿಡಲು ಆದರೆ ದೊರೆಯಬಹುದಾದ ಗರಿಷ್ಠ ಸಹಾಯಧನವನ್ನು ಮಾತ್ರ ಸರ್ಕಾರದಿಂದ ನೀಡುವ ಬಗ್ಗೆ ಆದೇಶ ಹೊರಡಿಸಲು ಕೋರಿರುತ್ತಾರೆ. ಸಹಾಯಧನದ ಗರಿಷ್ಠ ಮೊತ್ತಕ್ಕಿಂತ ಹೆಚ್ಚಿನ ವೆಚ್ಚವನ್ನು ರೈತರು ತಮ್ಮ ಸ್ವಂತ ಖರ್ಚಿನಲ್ಲಿ ಭರಿಸುವುದು ಅವಶ್ಯಕವಾಗಿರುತ್ತದೆ. ಜೊತೆಗೆ ರೈತರಿಗೆ ಮತ್ತು ಅಧಿಕಾರಿಗಳಿಗೆ ಈ ಯೋಜನೆಯಡಿ ಹೆಚ್ಚಿನ ತಾಂತ್ರಿಕ ಮಾಹಿತಿ ನೀಡಲು ಹೆಚ್ಚಿನ ತರಬೇತಿ ಮತ್ತು ಪ್ರಚಾರ ಕಾರ್ಯಕ್ರಮಗಳಿಗಾಗಿ ರೂ. 5.00 ಲಕ್ಷ ರೂ.ಗಳನ್ನು ಒದಗಿಸಲು ಕೋರಿರುತ್ತಾರೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 128 ತೋಯೋಕಾ 2003, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಉಪಕರಣಗಳನ್ನು ಖರೀದಿಸಿ ಅಳವಡಿಸುವ ರಾಜ್ಯದ ರೈತರುಗಳಿಗೆ ಕೆಳಕಾಣಿಸಿದ ಪ್ರಮಾಣದಲ್ಲಿ ಸಹಾಯಧನವನ್ನು ಒದಗಿಸಲು ತೋಟಗಾರಿಕೆ ನಿರ್ದೇಶಕರಿಗೆ ಆದೇಶ ನೀಡಲಾಗಿದೆ.

1. ಬಿಜಾಪುರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಎಲ್ಲಾ ರೈತರಿಗೆ ಶೇಕಡ 100ರ ಪ್ರಮಾಣದಲ್ಲಿ ಸಹಾಯಧನ ಒದಗಿಸುವುದು. ಗಂಗಾಕಲ್ಯಾಣ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಎಲ್ಲಾ ಜಿಲ್ಲೆಗಳಲ್ಲಿ ಶೇಕಡ 100ರ ಸಹಾಯಧನ ಒದಗಿಸುವುದು.

2. ರಾಜ್ಯದ ಇತರೆ ಜಿಲ್ಲೆಗಳಲ್ಲಿ ರೈತರಿಗೆ ಶೇಕಡ 50ರ ಪ್ರಮಾಣದಲ್ಲಿ ಸಹಾಯಧನ ಒದಗಿಸುವುದು.

ಬೆಳೆ ಅಂತರದ ಆಧಾರದ ಮೇರೆಗೆ ವಿವಿಧ ಬೆಳೆಗಳಿಗೆ ಹಾಗೂ ವಿವಿಧ ವಿಸ್ತೀರ್ಣಗಳಿಗೆ ಒದಗಿಸಲಾಗುವ ಗರಿಷ್ಠ ಪ್ರಮಾಣದ ಸಹಾಯಧನದ ಮೊತ್ತವನ್ನು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ಒದಗಿಸಲಾಗಿದೆ. ಈ ಆದೇಶ ಹೊರಡಿಸಿದ ದಿನಾಂಕದಿಂದ ಹನಿ ನೀರಾವರಿ ಅಳವಡಿಸಲಾಗುವ ಪ್ರಕರಣಗಳಿಗೆ ಈ ಯೋಜನೆ ಅನ್ವಯಿಸುತ್ತದೆ. ಈ ಕಾರ್ಯಕ್ರಮದಡಿ ಪ್ರತಿ ಫಲಾನುಭವಿಗೆ ಹಣ್ಣಿನ ಮತ್ತು ತೋಟದ ಬೆಳೆಗಳಿಗೆ ಅಳವಡಿಸುವ ಗರಿಷ್ಠ 2 ಹೆಕ್ಟೇರ್‌ರವರೆಗೆ ಹಾಗೂ ತರಕಾರಿ ಮತ್ತು ಹೂವಿನ ಬೆಳೆಗಳಿಗೆ ಗರಿಷ್ಠ 0.4 ಹೆಕ್ಟೇರ್‌ವರೆಗೆ ಸಹಾಯಧನ ಒದಗಿಸುವುದು. ತೋಟಗಾರಿಕೆ ನಿರ್ದೇಶಕರು ಕೈಗೊಂಡ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಿ ತಾಂತ್ರಿಕವಾಗಿ ಅನುಮೋದಿತವಾದ ಎಲ್ಲಾ ಕಂಪನಿಗಳು ಈ ಕಾರ್ಯಕ್ರಮದಡಿ ಹನಿ ನೀರಾವರಿ ಅಳವಡಿಸಲು ಅರ್ಹರಾಗಿರುತ್ತಾರೆ. ಆದರೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಲಾದ ಗರಿಷ್ಠ ಸಹಾಯಧನದ ಮಿತಿ ಅಥವಾ ಆಯಾ ತಾಕುಗಳಲ್ಲಿ ಹನಿನೀರಾವರಿ ಅಳವಡಿಕೆಗೆ ತಗಲುವ ನೈಜ ವೆಚ್ಚ, ಇವೆರಡರಲ್ಲಿ ಯಾವುದು ಕಡಿಮೆಯೊ ಅಷ್ಟು ಮೊತ್ತದ ಸಹಾಯಧನವನ್ನು ಅನುಮೋದಿತ ಶೇಕಡವಾರು ಮಿತಿಗೊಳಪಟ್ಟು ಪಡೆಯಲು ರೈತರು ಅರ್ಹರಾಗಿರುತ್ತಾರೆ. ಹೆಚ್ಚಿನ ವೆಚ್ಚವನ್ನು ರೈತರು ತಮ್ಮ ಸ್ವಂತ ಖರ್ಚಿನಲ್ಲಿ ಭರಿಸಬೇಕಾಗುತ್ತದೆ. ಕಂಪನಿ ಆಯ್ಕೆಯ ಪೂರ್ಣ ಸ್ವತಂತ್ರವು ರೈತರದೇ ಆಗಿರುತ್ತದೆ. ಸರ್ಕಾರದಿಂದ ಒದಗಿಸಲಾಗುವ ಸಹಾಯಧನವನ್ನು ರೈತರ ಹೆಸರಿಗೆ ತೆಗೆಯಲಾದ ಬ್ಯಾಂಕ್ ಚೆಕ್/ಡಿ.ಡಿ.ಮೂಲಕ ಪಾವತಿಸಲಾಗುವುದು. ಶೇ.100 ರಷ್ಟು ಸಹಾಯಧನ ಒದಗಿಸಲಾಗುವ ಫಲಾನುಭವಿಗಳಿಗೆ ಆಯಾ ಜಿಲ್ಲೆಗಳ ಹವಾಮಾನವನ್ನು ಪರಿಗಣಿಸಿ ಪ್ರಮುಖ ತೋಟಗಾರಿಕೆ ಬೆಳೆಗಳನ್ನು ಪರಿಗಣಿಸಲು ತೋಟಗಾರಿಕೆ ನಿರ್ದೇಶಕರು ನಿರ್ಧರಿಸುವುದು. ಯೋಜನೆಯ ಅನುಷ್ಠಾನದ ಬಗ್ಗೆ ರೈತರಿಗೆ ಅಧಿಕಾರಿಗಳಿಗೆ ಮತ್ತು ಕಂಪನಿಗಳಿಗೆ ಮಾರ್ಗಸೂಚಿಗಳನ್ನು ತೋಟಗಾರಿಕೆ ನಿರ್ದೇಶಕರು ಪ್ರತ್ಯೇಕವಾಗಿ ಹೊರಡಿಸುವುದು. ಈ ಯೋಜನೆಯ ಪ್ರಗತಿಯನ್ನು MMR ನಂತೆ ಹಂಚಿಕೆ ಮಾಡಿ ಪ್ರತಿ ಮಾಹೆ ಸರ್ಕಾರಕ್ಕೆ ಸಲ್ಲಿಸುವುದು.

ಈ ಯೋಜನೆಯ ಉದ್ದೇಶಕ್ಕಾಗಿ "ಹನಿ ನೀರಾವರಿಗಾಗಿ ಕೇಂದ್ರವಲಯ ಯೋಜನೆ" ಅಡಿ ಲೆಕ್ಕಶೀರ್ಷಿಕೆ 2401-00-108-2-30(ಯೋಜನೆ) ರಲ್ಲಿ ಲಭ್ಯವಾಗುವ ರೂ. 1,000 ಲಕ್ಷಗಳ (ರೂ.ಒಂದು ಸಾವಿರ ಲಕ್ಷಗಳು ಮಾತ್ರ) ಅನುದಾನವನ್ನು ಬಳಸಲು ಅನುಮತಿ ನೀಡಲಾಗಿದೆ. ಜಿಲ್ಲಾವಾರು ಅನುದಾನವನ್ನು ತೋಟಗಾರಿಕೆ ನಿರ್ದೇಶಕರು ಆಯಾ ಜಿಲ್ಲೆಯ ಬರ ಪರಿಸ್ಥಿತಿ, ತೋಟಗಾರಿಕೆ ಪ್ರಾಮುಖ್ಯತೆ ಹಾಗೂ ಬೇಡಿಕೆಯ ಆಧಾರದ ಮೇರೆಗೆ ಹಂಚಿಕೆ ಮಾಡುವುದು.

ತರಬೇತಿ ಮತ್ತು ಪ್ರಚಾರ ಕಾರ್ಯಕ್ರಮಗಳಿಗಾಗಿ ರೂ.5.00 ಲಕ್ಷಗಳನ್ನು ಈ ಯೋಜನೆಯಡಿ ಭರಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 15 ಪಿಎಫ್‌ಒ 2003 ದಿನಾಂಕ 7.6.2003 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 837 ವೆಚ್ಚ-4:03 ದಿನಾಂಕ 12.8.2003 ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಆದೇಶ ಸಂಖ್ಯೆ: ಕೃತೋಇ 128 ತೋಯೋಕಾ 2003 ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003ರ ಅನುಬಂಧ**

ವಿವಿಧ ಬೆಳೆ ಅಂತರಗಳಿಗೆ ವಿಸ್ತೀರ್ಣವಾರು ಒದಗಿಸಬಹುದಾದ ಗರಿಷ್ಠ ಸಹಾಯ ಧನ.

ಬೆಳೆ ಅಂತರ : ಮೀಟರ್‌ಗಳಲ್ಲಿ

ಸಹಾಯ ಧನ : ರೂ.ಗಳಲ್ಲಿ

**ಅ. 0.4 ಹೆಕ್ಟೇರ್ ಪ್ರದೇಶಕ್ಕೆ ಗರಿಷ್ಟ ಮಿತಿ**

| ಶೇಕಡವಾರು | 12x12 | 11x11 | 10x10 | 9x9 | 8x8 | 7x7 | 6x6 | 5x5 | 4x4 | 3x3 | 3x1.5 | 2.5x2.5 | 2x2 | 1.5x1.5 | 1x1 |
|---|---|---|---|---|---|---|---|---|---|---|---|---|---|---|---|
| 100% | 7300 | 8400 | 8600 | 8900 | 9200 | 9800 | 10400 | 10800 | 11400 | 13000 | 14600 | 14600 | 15300 | 19200 | 17800 |
| 50% | 3600 | 4200 | 4300 | 4400 | 4600 | 4900 | 5200 | 5400 | 5700 | 6500 | 7300 | 7300 | 7600 | 9600 | 8900 |

**ಆ. 1.00 ಹೆಕ್ಟೇರ್ ಪ್ರದೇಶಕ್ಕೆ ಗರಿಷ್ಟ ಮಿತಿ**

| ಶೇಕಡವಾರು | 12x12 | 11x11 | 10x10 | 9x9 | 8x8 | 7x7 | 6x6 | 5x5 | 4x4 | 3x3 | 3x1.5 | 2.5x2.5 | 2x2 |
|---|---|---|---|---|---|---|---|---|---|---|---|---|---|
| 100% | 12000 | 13400 | 13900 | 14600 | 15300 | 18400 | 21300 | 22800 | 27500 | 25000 | 29800 | 29100 | 31500 |
| 50% | 6400 | 6700 | 6900 | 7300 | 7600 | 9200 | 10600 | 11400 | 13700 | 12500 | 14900 | 14500 | 15700 |

**ಇ. 2.00 ಹೆಕ್ಟೇರ್ ಪ್ರದೇಶಕ್ಕೆ ಗರಿಷ್ಟ ಮಿತಿ**

| ಶೇಕಡವಾರು | 12x12 | 11x11 | 10x10 | 9x9 | 8x8 | 7x7 | 6x6 | 5x5 | 4x4 | 3x3 | 3x1.5 | 2.5x2.5 | 2x2 |
|---|---|---|---|---|---|---|---|---|---|---|---|---|---|
| 100% | 23300 | 24300 | 25200 | 27000 | 28400 | 38500 | 41200 | 46000 | 54500 | 60900 | 57600 | 58100 | 61600 |
| 50% | 11600 | 12100 | 12600 | 13500 | 14200 | 19200 | 20600 | 23000 | 27200 | 30400 | 28800 | 29000 | 30800 |

ತರಕಾರಿ ಮತ್ತು ಹೂವಿನ ಬೆಳೆಗಳಿಗೆ 0.4 ಹೆಕ್ಟೇರ್ ಗರಿಷ್ಟ ಮಿತಿ ನಿಗದಿಪಡಿಸಿರುವ ಕಾರಣ 1.00 ಮತ್ತು 2.00 ಹೆಕ್ಟೇರ್‌ಗಳಿಗೆ 1.5x1.5 ಮತ್ತು 1x1 ಮೀಟರ್ ಬೆಳೆ ಅಂತರಗಳ ಸಹಾಯಧನ ಮಿತಿ ನೀಡಿರುವುದಿಲ್ಲ.

**ಎನ್. ಮಂಜುಳಗೀತ**

ಪಿ.ಆರ್. 1187 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ನಾಗಾರ್ಜುನ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್‌ನವರ ಕಾಡುಮನೆ - 2 ಎಂಬ ಕಿರು ಜಲ ವಿದ್ಯುತ್ ಯೋಜನೆ Financial Closure ಮಾಡಲು ಕಾಲಾವಕಾಶ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಂಇ 259 ಎನ್‌ಸಿಇ 2002, ದಿನಾಂಕ: 8.7.2003.
2. ಮೆಸರ್ಸ್ ನಾಗಾರ್ಜುನ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಪತ್ರ ಸಂಖ್ಯೆ: NHEPL / KMHS / GOK / 0005, ದಿನಾಂಕ: 15.7.2003.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ / 06 / ನಾಗಾರ್ಜುನ / 2003 / 1122, ದಿನಾಂಕ: 24.7.2003.

**ಪ್ರಸ್ತಾವನೆ:**

ಮೆಸರ್ಸ್ ನಾಗಾರ್ಜುನ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಕಾಡುಮನೆ ಕಿರು ಜಲ ವಿದ್ಯುತ್ ಯೋಜನೆ - 2 ರ ಬಗ್ಗೆ ನಿಗದಿತ ಅವಧಿಯೊಳಗೆ ಫೈನಾನ್ಷಿಯಲ್ ಕ್ಲೋಸರ್‌ನ್ನು ಮಾಡದೆ ಇರುವ ಕುರಿತು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಜಾರಿ ಮಾಡಲಾಗಿತ್ತು.

2. ವಿವಿಧ ಇಲಾಖೆಗಳಿಂದ ತಾಂತ್ರಿಕ ಅನುಮೋದನೆ ಹಾಗೂ ಇತರ ಅನುಮೋದನೆಗಳನ್ನು ಪಡೆಯಲು ವಿಳಂಬವಾಗುತ್ತಿರುವುದರಿಂದ ಸಕಾಲದಲ್ಲಿ ಫೈನಾನ್ಷಿಯಲ್ ಕ್ಲೋಸರ್‌ನ್ನು ಮಾಡಲು ಸಾಧ್ಯವಾಗಿಲ್ಲವೆಂದೂ ಇದಕ್ಕಾಗಿ ಮುಂದಿನ 12 ತಿಂಗಳ ಕಾಲಾವಕಾಶ ನೀಡಬೇಕೆಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮೆಸರ್ಸ್ ನಾಗಾರ್ಜುನ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಸಮಜಾಯಿಷಿ ನೀಡಿರುತ್ತಾರೆ.

3. ಫೈನಾನ್ಷಿಯಲ್ ಕ್ಲೋಸರ್‌ಗಾಗಿ ಕಾಲಾವಕಾಶವನ್ನು ಮುಂದಿನ 12 ತಿಂಗಳು ವಿಸ್ತರಿಸಲು ಮೇಲೆ (3) ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 259 ಎನ್‌ಸಿಇ 2002 ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ನಾಗಾರ್ಜುನ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 15 ಮೆಗಾ ವ್ಯಾಟ್ ಸಾಮರ್ಥ್ಯದ ಕಾಡುಮನೆ - 2 ಕಿರು ಜಲ ವಿದ್ಯುತ್ ಯೋಜನೆಗೆ ಸಂಬಂಧಿಸಿದಂತೆ ಫೈನಾನ್ಷಿಯಲ್ ಕ್ಲೋಸರ್‌ಗಾಗಿ ಈ ಆದೇಶ ಹೊರಡಿಸಿದ ದಿನಾಂಕದಿಂದ 12 ತಿಂಗಳುಗಳ ಕಾಲಾವಕಾಶವನ್ನು ಅಂತಿಮ ಅವಕಾಶವಾಗಿ ವಿಸ್ತರಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1188 **ಕೆ.ಎಲ್. ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಹೊಸಂಗಡಿ ಹೈಡ್ರೋ ಪವರ್ ಪ್ರಾಜೆಕ್ಟ್ (A division of Bobba aviation services Private Limited) ಕಂಪನಿಗೆ 3 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಹೊಸಂಗಡಿ / 2003 / 292, ದಿನಾಂಕ: 3.3.2003.
2. ದಿನಾಂಕ: 4.7.2003 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಹೊಸಂಗಡಿ ಹೈಡ್ರೋ ಪವರ್ ಪ್ರಾಜೆಕ್ಟ್ (A division of Bobba aviation services Private Limited) ಅಲಸೂರು, ಬೆಂಗಳೂರು ಈ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಮೂಡಬಿದರೆ ಗ್ರಾಮದ ಬಳಿ ಹೊಸಂಗಡಿ ಹೊಳೆಗೆ ಅಡ್ಡಲಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಂ೧ 57 ಎನ್‌ಸಿಇ 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಹೊಸಂಗಡಿ ಹೈಡ್ರೋ ಪವರ್ ಪ್ರಾಜೆಕ್ಟ್ಸ್ (A division of Bobba aviation services Private Limited) ಅಲಸೂರು, ಬೆಂಗಳೂರು ಈ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಮೂಡಬಿದರೆ ಗ್ರಾಮದ ಬಳಿ ಹೊಸಂಗಡಿ ಹೊಳೆಗೆ ಅಡ್ಡಲಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲ್ಯಾಂಜಿಟ್ಯೂಡ್ 75-4'-43" ಪೂರ್ವ ಮತ್ತು ಲ್ಯಾಂಜಿಟ್ಯೂಡ್ 13-2'-41" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000-00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1189

**ಕೆ.ಎಲ್. ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಕೆ. ಅಂಡ್ ಎಂ ಪ್ರಾಜೆಕ್ಟ್ಸ್ ಅಂಡ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ, ಹಂಚಿಕೆ ಆಗಿರುವ 18 ಮೆಗಾ ವ್ಯಾಟ್ ಸಾಮರ್ಥ್ಯದ ದೊಡ್ಡಹಳ್ಳ ಕಿರುಜಲ ವಿದ್ಯುತ್ ಯೋಜನೆಯನ್ನು ರದ್ದು ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 54 ಎನ್‌ಸಿಇ 99, ದಿನಾಂಕ: 1.4.2000.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ದೊಡ್ಡಹಳ್ಳ / 2003 / 740, ದಿನಾಂಕ: 23.5.2003.

**ಪ್ರಸ್ತಾವನೆ:**

ಮೆಸರ್ಸ್ ಕೆ. ಅಂಡ್ ಎಂ ಪ್ರಾಜೆಕ್ಟ್ಸ್ ಅಂಡ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಬಂಜೂರು ಗ್ರಾಮದ ಬಳಿ ದೊಡ್ಡಹಳ್ಳ ನದಿಗೆ ಅಡ್ಡಲಾಗಿ 18 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

2. ಪ್ರಸ್ತುತ ಅಭಿವೃದ್ಧಿದಾರರು ಸದರಿ ಯೋಜನೆಯಲ್ಲಿ ಆಸಕ್ತಿ ಇಲ್ಲವೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ತಿಳಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಮಾಡುವಂತೆ ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರವನ್ನು ಕೋರಿರುವ ಹಿನ್ನಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 135 ಎನ್‌ಸಿಇ 2003, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2003**

3. ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಸರ್ಕಾರವು ಪರಿಶೀಲಿಸಿದ ನಂತರ ಮೆಸರ್ಸ್ ಕೆ. ಅಂಡ್ ಎಂ ಪ್ರಾಜೆಕ್ಟ್ಸ್ ಅಂಡ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಬಂಜೂರು ಗ್ರಾಮದ ಬಳಿ ದೊಡ್ಡಹಳ್ಳ ನದಿಗೆ ಅಡ್ಡಲಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾದ 18 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1190

**ಕೆ.ಎಲ್. ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## AGRICULTURE AND HORTICULTURE SECRETARIAT

**Sub:** National Co-operative Development Corporation sponsored scheme - Expansion of Fruits and Vegetables marketing activities of HOPCOMS - Repayment of loan to NCDC - Reg.

**Read:**
1. Government Order No. AHD 71 HPP 1992 Dt.14-2-1993.
2. Letter No. NCDC/18-1/2003-RDS/419 Dt. 22-8-2003.
3. Letter of Director of Horticulture No. Thoe/Lesha/Vini-1/47/94-95 Dt. 2-9-2003.

**PREAMBLE:**

In the Government Order read at (1) above sanction was accorded for the implementation of National Co-operative Development Corporatioon assisted project for Expansion of Fruits and Vegetables Marketing Activities of Horticulture Producers Cooperative Marketing and Processing Society Ltd. (HOPCOMS) Bangalore at a total cost of Rs.440 lakhs. As per the sanction, the State Government has contributed a sum of Rs. 198.00 lakh as share capital to HOPCOMS of which Rs. 110.00 lakhs has been reimbursed by NCDC as loan to State Government.

In the letter read (2) above NCDC has communicated that an installment of Rs. 12,31,974/- will be due for payment to the Corporation on 5-10-2003 against the loans advanced before allowing the rebate for timely payment. The Director of Horticulture, Bangalore in the letter read at (3) above has submitted a proposal for the payment of loan installment of Rs. 12,31,974/- (Rs. 8,33,400/- as principal and Rs. 3,98,574/- as interest) to National Cooperative Development Corporation before 5-10-2003.

The proposal is examined and following order is passed.

**Government Order No. AHD 167 HPP 2003, Bangalore, Dated: 12th September 2003**

The Government are pleased to accord sanction for repayment of loan of Rs. 8,33,400/- as principal and Rs/3,98,574/-as interest together totalling to an amount of Rs. 12,31,974/- (Rupees Twelve lakhs Thirty one Thousand Nine hundred Seventy Four only) to National Cooperative Development Corporation, New Delhi.

The expenditure towards the principal shall be debited to the Head of Account "6003-Internal Debts of the State Government 00-108-0-01" loans from National Cooperative Development Corporation (Non Plan) and the interest under the head of account "2049 Interest Payment 01 Interest on Internal Debt. 200-Interest on other Internal Debts 2-Interest on Loan from NCDC-00 (Non Plan)".

This order issues as per the guidelines issued in circular No. FD/118/BGL/98 dated 1-12-1998 of the Finance Department.

By Order and in the name of the Governor of Karnataka,

**N. MANJULA GEETHA**

P.R. 1192

Under Secretary to Government,
Agriculture & Horticulture Department.

**INFRASTRUCTURE DEVELOPMENT SECRETARIAT**

**Sub:** Release of funds in 2003-04 for the Hassan-Mangalore Gauge Conversion Project

**Read:**
1. G.O. No. IDD 11 NSW 2001, Dated 22-10-2001.
2. G.O. No. IDD 11 NSW 2001, Dated 31-03-2003.
3. Letter No.W.63/B/CN/BNC/Genl. Dt. 11.07.2003 from Chief Administrative Officer (Construction), SW Railway, Bangalore.

**PREAMBLE:**

1. In the Government Order read at (1) above, Government of Karnataka (GoK) had accorded sanction for incorporating a Special Purpose Vehicle (SPV) called the Hassan-Mangalore Rail Development Company (HMRDC) for implementing Hassan Mangalore Gauge Conversion Project (HMGCP) GoK and Ministry of Railways are expected to invest Rs. 45 crores each in the equity of HMRDC either directly or through K-RIDE.
2. In the Government Order read at (2) above Rs.6.00 crores have been released to Railways towards the expenditure on the HMGCP, subject to condition that the said amount would be treated as the equity of Government of Karnataka in HMRDC after it is duly established.
3. On 29$^{th}$ April 2003, the Cabinet Committee on Economic Affairs, Government of India have approved formation of HMRDC. HMRDC Ltd. has since been incorporated on 1-07-2003 under the Companies Act 1956. The necessary project agreements would be signed shortly.
4. Meanwhile, in the letter read at 3 above, a request for a further release of Rs. 6 crore has been made. GoK has considered the matter and decided to release Rs.2 crore as equity amount of Government of Karnataka in the HMRDC in addition to Rs.6.00 crores already released on 31-03-2003. Hence this order.

**Government Order No. IDD 41 NSW 2003, Bangalore, Dated: 12th September 2003**

1. In the circumstances explained in the preamble, the Government of Karnataka is pleased to sanction the release of Rs.2 crores (Rupees Two crores only) towards the expenditure on the HMGCP. This amount would subsequently be converted as the equity of GoK in HMRDC.
2. The Managing Director, iDeCK is authorized to draw the said amount on Payee's Receipt duly countersigned by the Under Secretary to Government, Infrastructure Development Department and deposit the same with the Financial Adviser and Chief Accounts Officer (Construction), Southern Railways, Bangalore.
3. This expenditure shall be met out of the Head of Account "5465-01-190-3-02-211 Hassan-Mangalore Gauge Conversion Project Investments (Plan)"
4. This order issues with the concurrence of Finance Department vide its U.O.Note No. FD 1349/Exp-I/2003 dated 23-08-2003.

By Order and in the name of the Governor of Karnataka,

**T.B. RENUKA PRASAD**

P.R. 1193

Under Secretary to Government,
Infrastructure Development Department.

**Sub:** Release of funds in 2003-04 for new Railway projects

**Read:**
1. G.O. No. IDD 1 NSW 2002, Dated 22-03-2002.
2. Letter No.W.63/B/CN/BNC/Genl., Dt. 11.07.2003 from the Chief Engineer (Construction), South Western Railway, Bangalore.

**PREAMBLE:**

1. In the Government Order read at (1) above, the Government of Karnataka (GoK) has accorded administrative approval for bearing two thirds of the total cost of Rs.187 crores of the following three important railway projects which are vital railway links in the State and which should be completed by March, 2005:

(i) Kottur-Harihar-(New line)
(ii) Bangalore-Kengeri (Doubling)
(iii) Kengeri-Ramanagaram (Doubling).

2. In the letter read at (2) above, the Chief Engineer (Construction), South Western Railway, Bangalore has furnished the forecast of the expenditure of the above three cost-sharing projects for the quarter ending 30-6-2003 and 30-9-2003 and requested GoK to release an amount of Rs. 7 crores.

3. GoK, having examined the proposal, has decided to release Rs. One crore as its share of the above three cost sharing projects. Hence this order.

**Government Order No. IDD 47 NSW 2003, Bangalore, Dated: 12th September 2003**

1. In the circumstances explained above, the GoK are pleased to release an amount of 1.00 crore (Rupees One crore only) to the Ministry of Railways, Government of India towards the share of anticipated expenditure for the quarter ending 30-9-2003 for the following three cost-sharing works:

(i) Kottur-Harihar-(New line)

(ii) Bangalore-Kengeri (Doubling)

(iii) Kengeri-Ramanagaram (Doubling).

2. This expenditure shall be met out of the Budget provision under the head of account "5465-01-190-3-05-211-Cost Sharing for New Projects-Investments (Plan)".

3. The Managing Director, iDeCK is authorised to draw the amount on a payee's receipt duly countersigned by the Under Secretary to Government, Infrastructure Development Department and in turn issue a cheque for the amount drawn in favour of the Financial Adviser and Chief Accounts Officer (Construction), South Western Railway, Bangalore.

4. This order issues with the concurrence of Finance Department vide its U.O.Note No. FD 1350 Exp.I/2003 dated 3-09-2003.

By Order and in the name of the Governor of Karnataka,

**T.B. RENUKA PRASAD**

Under Secretary to Government,

Infrastructure Development Department.

P.R. 1194

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ರೇಷ್ಮೆ ಗೂಡಿಗೆ ಪ್ರೋತ್ಸಾಹಧನ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ವಾಕೈ 205 ರೇಕೃವಿ 02 ದಿ:13.9.2002.
2. ಸರ್ಕಾರದ ಆದೇಶ ಸಂ:ವಾಕೈ 205 ರೇಸೇವಿ 02 ದಿ:17.10.2002.
3. ಸರ್ಕಾರದ ಆದೇಶ ಸಂ:ವಾಕೈ 205 ರೇಸೇವಿ 02 ದಿ:3.12.2002.
4. ಪತ್ರ ಸಂ:ರೇನಿ:ಗೂಮಾ:ಪ್ರೋಧನ:ವಂಟನೆ/91-2002-03 ದಿ:29.1.2003.

**ಪ್ರಸ್ತಾವನೆ:**

ರಾಜ್ಯದಲ್ಲಿ ರೇಷ್ಮೆ ಗೂಡಿನ ಬೆಲೆ ಕುಸಿದು, ರೇಷ್ಮೆ ಬೆಳೆಗಾರರು ಸಂಕಷ್ಟದಲ್ಲಿದ್ದ ಹಿನ್ನೆಲೆಯಲ್ಲಿ ಮೇಲೆ (1) ಓದಲಾದ ಆದೇಶದಲ್ಲಿ ರೇಷ್ಮೆ ಗೂಡಿನ ಮಾರುಕಟ್ಟೆಗಳಲ್ಲಿ ನೂಲು ಬಿಚ್ಚಾಣಿಕೆಗೆ ವಹಿವಾಟಾಗುವ ಸಾಮಾನ್ಯ ಮಿಶ್ರತಳಿ ಸುಧಾರಿತ ಮಿಶ್ರತಳಿ ಮತ್ತು ದ್ವಿತಳಿ ಗೂಡಿಗೆ ಪ್ರತಿ ಕೆ.ಜಿ.ಗೆ ರೂ.10-00 ರಂತೆ ಪ್ರೋತ್ಸಾಹಧನ ನೀಡಲು ಮಂಜೂರಾತಿ ನೀಡಲಾಗಿತ್ತು.

ಈ ಯೋಜನೆಗೆ ತಗಲುವ ವೆಚ್ಚವನ್ನು ಶೇ. 50:50ರ ಅನುಪಾತದಲ್ಲಿ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರ ಭರಿಸಬೇಕಾಗಿದ್ದು, ರಾಜ್ಯದ ಪಾಲಾದ ರೂ.5.76 ಕೋಟಿಗಳಲ್ಲಿ ರೂ.1.92 ಕೋಟಿಗಳನ್ನು ಮೇಲೆ ಓದಲಾದ (2) ಆದೇಶದಲ್ಲಿ ಬಿಡುಗಡೆ ಮಾಡಲಾಗಿದ್ದು, ರೂ.1.92. ಕೋಟಿಯನ್ನು ಮೇಲಿನ (3) ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ದಿನಾಂಕ:1.11.2002 ರಿಂದ 15.12.02ರವರೆಗಿನ ಅವಧಿಯಲ್ಲಿ 37 ಮಾರುಕಟ್ಟೆಗಳಲ್ಲಿ 6472.4 ಮೆಟ್ರಿಕ್ ಟನ್ ರೇಷ್ಮೆ ಗೂಡುಗಳು ರೇಷ್ಮೆ ನೂಲು ಬಿಚ್ಚಾಣಿಕೆಗೆ ವಹಿವಾಟಾಗಿರುವುದರಿಂದ ರಾಜ್ಯ ಸರ್ಕಾರದ ಭಾಗವಾದ ರೂ.212.92 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ರೇಷ್ಮೆ ಆಯುಕ್ತರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ವಾಕೈ:205 ರೇಸೇವಿ 2002 ಬೆಂಗಳೂರು ದಿನಾಂಕ: 16ನೇ ಸೆಪ್ಟೆಂಬರ್ 2003**

ರಾಜ್ಯದ ರೇಷ್ಮೆ ಗೂಡಿನ ಮಾರುಕಟ್ಟೆಗಳಲ್ಲಿ ನೂಲು ಬಿಚ್ಚಾಣಿಕೆಗೆ 1.11.02 ರಿಂದ 15.12.02 ರವರೆಗೆ ವಹಿವಾಟಾದ ರಾಜ್ಯದಲ್ಲಿ ಉತ್ಪಾದಿಸಿದ ಸಾಮಾನ್ಯ ಮಿಶ್ರತಳಿ, ಸುಧಾರಿತ ಮಿಶ್ರತಳಿ ಮತ್ತು ದ್ವಿತಳಿ ಗೂಡಿಗೆ ಪ್ರತಿ ಕೆ.ಜಿ.ಗೆ ರೂ.10.00ಗಳ ಪ್ರೋತ್ಸಾಹಧನವನ್ನು ಪಾವತಿಸುವ ಸಲುವಾಗಿ ರೂ.2.13 ಕೋಟಿಗಳನ್ನು (ಎರಡು ಕೋಟಿ ಹದಿಮೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿದೆ.

ಆ ಸಂಬಂಧದ ವೆಚ್ಚವನ್ನು 2003-04ನೇ ಸಾಲಿಗೆ ಬೆಲೆ ಸ್ಥಿರೀಕರಣ ನಿಧಿ ಪ್ರಾಧಿಕಾರ ಲೆಕ್ಕ ಶೀರ್ಷಿಕೆ 2851-00-107-2-03 (ಯೋಜನೇತರ) 2003-04ರ ಅಡಿ ಭರಿಸುವುದು.

ಆ ಮೊತ್ತದ ಬಿಲ್ಲಿಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು, ಇವರ ಮೇಲು ಸಹಿ ಮಾಡಲು ಅಧಿಕಾರವನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಎಫ್‌ಡಿ 1426:ವೆಚ್ಚ 1:2003 ದಿನಾಂಕ:5.9.2003ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ)

ಪಿ.ಆರ್. 1203

**ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವಾಲಯ**

**ವಿಷಯ:** ರಿಟ್ ಅರ್ಜಿ ಕ್ರಮಾಂಕ 1554-59/98ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪಿನ ಅನುಷ್ಠಾನ - ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಎರಡು ದಲಾಯತ್ ಹಾಗೂ ಎರಡು ವಾಹನ ಚಾಲಕರ ಸೂಪರ್ ನ್ಯೂಮರರಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಷ್ಟಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ರಿಟ್ ಅರ್ಜಿ ಕ್ರಮಾಂಕ 1554-59/98ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪು ದಿನಾಂಕ 27.03.2002.

2. ಸರಕಾರದ ಅಧಿಕೃತ ಜ್ಞಾಪನ ಕ್ರಮಾಂಕ ಸಿಐ (ಎಲ್‌ಸಿ) 48 ಎಲ್‌ಎಸ್‌ಟಿ 02 ದಿನಾಂಕ 19.08.2002.

**ಪ್ರಸ್ತಾವನೆ:**

ಕರ್ನಾಟಕ ದೂರ ಸಂವೇದಿ ತಂತ್ರಜ್ಞಾನ ಬಳಕೆ ಕೇಂದ್ರವನ್ನು ಕರ್ನಾಟಕ ದೂರ ಸಂವೇದಿ ಅನ್ವಯಕ ಕೇಂದ್ರವೆಂದು ಸ್ವಾಯತ್ತ ಸಂಸ್ಥೆಯಾಗಿ ಸರಕಾರಿ ಆದೇಶ ಕ್ರಮಾಂಕ ಡಿಎಸ್‌ಟಿ 364 ಎಸ್‌ಟಿಎಸ್ 95 ದಿನಾಂಕ 29.11.96 ಅನುಸಾರ ಪರಿವರ್ತಿಸಿದಾಗ ಸದರಿ ಕೇಂದ್ರದ ಆಗಿನ ಆಸ್ತಿ, ಸಿಬ್ಬಂದಿ ಹಾಗೂ ಹುದ್ದೆಗಳು ಹೊಸ ಸ್ವಾಯತ್ತ ಸಂಸ್ಥೆಗೆ ವರ್ಗಾಯಿಸಲ್ಪಟ್ಟಿವೆ. ಹೀಗೆ ವರ್ಗಾವಣೆಗೊಂಡಾಗ ತಮ್ಮ ಒಪ್ಪಿಗೆ ಪಡೆದಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಸರಕಾರಿ ಸೇವೆಯಲ್ಲಿಯೇ ಮುಂದುವರಿಸುವುದಕ್ಕಾಗಿ ಸದರಿ ಸಂಸ್ಥೆಯ ಈ ಕೆಳಕಾಣಿಸಿದ ನೌಕರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ರಿಟ್ ಅರ್ಜಿ ಕ್ರಮಾಂಕ 1554-1559/98ಗಳನ್ನು ಸಲ್ಲಿಸಿದ್ದರು.

01. ಶ್ರೀ ಎನ್. ಶಂಕರಯ್ಯ - ವಾಹನ ಚಾಲಕರು
02. ಶ್ರೀ ವಿ. ದಾಸಪ್ರಕಾಶ್ - ಗ್ರೂಪ್ ಡಿ ನೌಕರರು
03. ಶ್ರೀಮತಿ ಬಿ.ಎಂ. ಸೊಣ್ಣಮ್ಮ - ಗ್ರೂಪ್ ಡಿ ನೌಕರರು
04. ಶ್ರೀ ಶ್ರೀನಿವಾಸ - ವಾಹನ ಚಾಲಕರು
05. ಶ್ರೀ ಕೆ. ಮುನಿಯಪ್ಪ - ಗ್ರೂಪ್ ಡಿ ನೌಕರರು
06. ಶ್ರೀ ಬಿ.ಎನ್. ಚೆನ್ನಪ್ಪ - ಗ್ರೂಪ್ ಡಿ ನೌಕರರು

ಈ ರಿಟ್ ಅರ್ಜಿಯನ್ನು ಪರಿಶೀಲಿಸಿದ ಕರ್ನಾಟಕ ನ್ಯಾಯ ಮಂಡಳಿಯು ದಿನಾಂಕ 27.03.2002ರಂದು ತೀರ್ಪುನೀಡಿ ಸದರಿ ನೌಕರರ ಒಪ್ಪಿಗೆ ಇಲ್ಲದೆ ಸ್ವಾಯತ್ತ ಸಂಸ್ಥೆಯಲ್ಲಿ ಮುಂದುವರಿಸಿರುವುದು ಸರಿಯಲ್ಲವೆಂದು ತಿಳಿಸಿ, ಸದರಿ ತೀರ್ಪಿನ ದಿನಾಂಕದಿಂದ 6 ತಿಂಗಳೊಳಗಾಗಿ ಇವರ ಸೇವೆಯನ್ನು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಸೂಕ್ತ ಆದೇಶ ಹೊರಡಿಸುವ ಮೂಲಕ ಅಗತ್ಯವಿದ್ದರೆ ಜಾರಿಯಲ್ಲಿರುವ ನಿಯಮಗಳಿಗೆ ತಿದ್ದುಪಡಿ ತಂದು ಅಥವಾ ಬೇರೆ ಯಾವುದೇ ಸರಕಾರದ ಇಲಾಖೆಗಳಲ್ಲಿ ವಿಲೀನಗೊಳಿಸಿ ಸಕ್ರಮಗೊಳಿಸುವಂತೆ ಆದೇಶಿಸಿದೆ.

ಈ ಪ್ರಕರಣದಲ್ಲಿ ನ್ಯಾಯ ಮಂಡಳಿಯ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಉಲ್ಲೇಖ (2)ರಲ್ಲಿ ತಿಳಿಸಿರುವ ಅಧಿಕೃತ ಜ್ಞಾಪನದಲ್ಲಿ ತೀರ್ಮಾನಿಸಲಾಗಿದ್ದುದರಿಂದ ತೀರ್ಪನ್ನು ಅನುಷ್ಠಾನಗೊಳಿಸಬೇಕಾಗಿದೆ.

ಪ್ರಸಕ್ತ ವಿಷಯದಲ್ಲಿ ಕಾನೂನು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಮತ್ತು ಆರ್ಥಿಕ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದೆ ಮತ್ತು ಆ ಇಲಾಖೆಗಳು ನ್ಯಾಯ ಮಂಡಳಿಯ ಆದೇಶಾನುಸಾರ ಸದರಿ ನೌಕರರನ್ನು ಸರಕಾರಿ ಸೇವೆಯಲ್ಲಿ ತತ್ಸಮಾನ ಹುದ್ದೆಗಳಲ್ಲಿ ವಿಲೀನಗೊಳಿಸಲು ಸಲಹೆ ಮಾಡಿವೆ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ 'ಡಿ' ಗುಂಪಿನ ಎರಡು ಹುದ್ದೆಗಳು ಖಾಲಿಯಿದ್ದು, ಈ ಹುದ್ದೆಗಳಿಗೆದುರಾಗಿ ಇಬ್ಬರು 'ಡಿ' ಗುಂಪಿನ ನೌಕರರನ್ನು ವಿಲೀನಗೊಳಿಸಬಹುದಾಗಿದೆ. ಆದರೆ ಉಳಿದ ಇಬ್ಬರು ವಾಹನ ಚಾಲಕರು ಹಾಗೂ ಇಬ್ಬರು 'ಡಿ' ಗುಂಪಿನ ನೌಕರರನ್ನು ಸರಕಾರಿ ಸೇವೆಯಲ್ಲಿ ವಿಲೀನಗೊಳಿಸಲು ಬೇರೆ ಇಲಾಖೆಗಳಲ್ಲಿ ತತ್ಸಮಾನ ವೃಂದದ ಹುದ್ದೆಗಳ ಲಭ್ಯತೆಯ ಬಗ್ಗೆ ಪತ್ರ ವ್ಯವಹಾರ ನಡೆಸಲು ಸಾಕಷ್ಟು ಸಮಯಾವಕಾಶ ಇಲ್ಲದೆ ಇರುವುದರಿಂದ ತಾತ್ಕಾಲಿಕವಾಗಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ಎರಡು ವಾಹನ ಚಾಲಕರ ಹಾಗೂ ಎರಡು 'ಡಿ' ಗುಂಪಿನ ಸೂಪರ್ ನ್ಯೂಮರರಿ ಹುದ್ದೆಗಳನ್ನು ಸೃಷ್ಟಿಸಿ ಸದರಿ ನೌಕರರನ್ನು ಅವುಗಳಿಗೆದುರಾಗಿ ನೇಮಕಾತಿ ಮಾಡಿ ತದನಂತರ ಇತರ ಇಲಾಖೆಗಳೊಂದಿಗೆ ಪತ್ರ ವ್ಯವಹಾರ ಮಾಡಬಹುದೆಂದು ಪ್ರಸ್ತಾಪಿಸಲಾಗಿದೆ.

ಆದುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಕ್ರಮಾಂಕ ಮಾತಂಇ 06 ಇಸಂಸೇ 2002 (1) ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇಲ್ಲಿ ಈ ಕೆಳಕಾಣಿಸಿದ ಸೂಪರ್ ನ್ಯೂಮರರಿ ಹುದ್ದೆಗಳನ್ನು ಪ್ರಾರಂಭಿಕವಾಗಿ ಒಂದು ವರ್ಷದ ಅವಧಿಗೆ ಸೃಷ್ಟಿಸಲು ಸರಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಹುದ್ದೆಗಳು |
|---|---|---|---|
| 01. | ವಾಹನ ಚಾಲಕರು | ರೂ. 3000-5480 | 2 |
| 02. | ದಲಾಯತ್ | ರೂ. 2500-3850 | 2 |

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2416 ಸೇನಿ.ಎ:2002 ದಿನಾಂಕ 30.10.2002 ಮತ್ತು ಕಾನೂನು ಇಲಾಖೆ ಅನಧಿಕೃತ ಟಿಪ್ಪಣಿ ಕ್ರಮಾಂಕ LAW 820 OPN-III 2002 ದಿನಾಂಕ

28.09.2002ರಲ್ಲಿ ನೀಡಿರುವ ಸಲಹೆ ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1105 ಸೇ.1/2003 ದಿನಾಂಕ 26.08.2003ರಲ್ಲಿ ನೀಡಿರುವ ಸಹಮತಿಗಳನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ಆನಂದ**

ಪಿ.ಆರ್. 1195

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

**ಸರ್ಕಾರಿ ಆದೇಶ ಕ್ರಮಾಂಕ ಮಾತಂಇ 06 ಇಸಂಸೇ 2002 (2) ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ಸರಕಾರದ ಆದೇಶ ಕ್ರಮಾಂಕ: ಡಿಎಸ್‌ಟಿ 364 ಎಸ್ ಟಿ ಎಸ್ 95 ದಿನಾಂಕ 29.11.96 ಅನುಸಾರ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಧೀನದಲ್ಲಿ ಅಸ್ತಿತ್ವದಲ್ಲಿದ್ದ "ಕರ್ನಾಟಕ ದೂರ ಸಂವೇದಿ ತಂತ್ರಜ್ಞಾನ ಬಳಕೆ ಕೇಂದ್ರ"ವು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಕ ಕೇಂದ್ರವೆಂಬ ಹೆಸರಿನಲ್ಲಿ ಸ್ವಾಯತ್ತ ಸಂಸ್ಥೆಯಾಗಿ ಪರಿವರ್ತನೆಗೊಂಡಾಗ ಸಿಬ್ಬಂದಿ ವರ್ಗದವರನ್ನು ಅವರ ಇಚ್ಛೆಯನ್ನು ಪಡೆಯದೆಯೇ ಸ್ವಾಯತ್ತ ಸಂಸ್ಥೆಗೆ ವರ್ಗಾಯಿಸಿರುವುದು ಸಮಂಜಸವಲ್ಲವೆಂದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ರಿಟ್ ಅರ್ಜಿ ಕ್ರಮಾಂಕ 1554-59/98 ರಲ್ಲಿ ತೀರ್ಪು ನೀಡಿ ವರ್ಗಾವಣೆಯನ್ನು ಅನೂರ್ಜಿತಗೊಳಿಸಿದೆ. ಈ ತೀರ್ಪಿನ ವಿರುದ್ಧ ಸರಕಾರವು ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ, ಈಗ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಕ ಕೇಂದ್ರದಲ್ಲಿರುವ ಈ ಕೆಳಕಾಣಿಸಿದ ನೌಕರರನ್ನು ಅವರುಗಳ ಹೆಸರಿನ ಎದುರು ಕಾಣಿಸಿರುವ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿನ ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ 1977ರ ನಿಯಮ 16ರ ಅನುಸಾರ ವರ್ಗಾಯಿಸಿ ನೇಮಿಸುವ ಮೂಲಕ ಸರಕಾರಿ ಸೇವೆಯಲ್ಲಿ ವಿಲೀನಗೊಳಿಸಿದೆ.

| ಕ್ರಮಾಂಕ | ನೌಕರರ ಹೆಸರು | ಹುದ್ದೆಯ ಹೆಸರು |
|---|---|---|
| 01. | ಶ್ರೀ ಎನ್. ಶಂಕರಯ್ಯ<br>ವಾಹನ ಚಾಲಕರು | ಸರಕಾರಿ ಆದೇಶ ಕ್ರಮಾಂಕ ಮಾತಂಇ 06 ಇಸಂಸೇ 2002 (1) ದಿನಾಂಕ 09.09.2003ರಲ್ಲಿ ಹೊಸದಾಗಿ ಸೃಷ್ಟಿಸಿರುವ ಸೂಪರ್ ನ್ಯೂಮರರಿ ವಾಹನ ಚಾಲಕರ ಹುದ್ದೆ. |
| 02. | ಶ್ರೀ ಶ್ರೀನಿವಾಸ<br>ವಾಹನ ಚಾಲಕರು | ---------ಡೂ--------- |
| 03. | ಶ್ರೀ ವಿ. ದಾಸಪ್ರಕಾಶ<br>ಗ್ರೂಪ್ ಡಿ ನೌಕರರು | ಸರಕಾರಿ ಆದೇಶ ಕ್ರಮಾಂಕ ಮಾತಂಇ 06 ಇಸಂಸೇ 2002 (1) ದಿನಾಂಕ 09.09.2003ರಲ್ಲಿ ಹೊಸದಾಗಿ ಸೃಷ್ಟಿಸಿರುವ ಸೂಪರ್ ನ್ಯೂಮರರಿ ದಲಾಯತರ ಹುದ್ದೆ. |
| 04. | ಶ್ರೀ ಬಿ.ಎನ್. ಚೆನ್ನಪ್ಪ<br>ಗ್ರೂಪ್ ಡಿ ನೌಕರರು | ---------ಡೂ--------- |
| 05. | ಶ್ರೀಮತಿ ಬಿ.ಎಂ. ಸೊಣ್ಣಮ್ಮ<br>ಗ್ರೂಪ್ ಡಿ ನೌಕರರು | ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಖಾಲಿ ಇರುವ ಹುದ್ದೆಯಲ್ಲಿ |
| 06. | ಶ್ರೀ ಕೆ. ಮುನಿಯಪ್ಪ<br>ಗ್ರೂಪ್ ಡಿ ನೌಕರರು | ---------ಡೂ--------- |

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2416 ಸೇನಿ.ಎ:2002 ದಿನಾಂಕ 30.10.2002, ಕಾನೂನು ಇಲಾಖೆ ಅನಧಿಕೃತ ಟಿಪ್ಪಣಿ ಕ್ರಮಾಂಕ LAW 820 OPN-III 2002 ದಿನಾಂಕ 28.09.2002 ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1105 ಸೇ.1/2003 ದಿನಾಂಕ 26.08.2003ರಲ್ಲಿ ನೀಡಿರುವ ಅಭಿಪ್ರಾಯ/ಸಹಮತಿಗಳ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ಆನಂದ**

ಪಿ.ಆರ್. 1196

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

**ಕಂದಾಯ ಸಚಿವಾಲಯ**

**ಸರ್ಕಾರದ ಆದೇಶ ಸಂಖ್ಯೆ: ಕಂಇ 43 ಎಡಿಇ 2003, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2003**

**ವಿಷಯ:** ಶ್ರೀ ಬಿ. ಶಿವರುದ್ರ ಸ್ವಾಮಿ, ತಹಶೀಲ್ದಾರ್, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

ಶ್ರೀ ಬಿ. ಶಿವರುದ್ರಸ್ವಾಮಿ, ತಹಶೀಲ್ದಾರ್, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರು ಜುಲೈ 2000ದಿಂದ ಇಲ್ಲಿಯವರೆಗೆ ವೃದ್ಧಾಪ್ಯ ವೇತನ/ ವಿಧವಾ ವೇತನ/ ಅಂಗವಿಕಲರ ವೇತನಗಳನ್ನು ಮಂಜೂರು ಮಾಡಿದ್ದು, ಈ ಮಂಜೂರಾತಿಗಳನ್ನು ನಿಯಮಗಳನ್ನು ಅನುಸರಿಸದೇ ಹಾಗೂ ಗ್ರಾಮಕರಣಿಕರಿಂದ ಹಾಗೂ ಕಂದಾಯ ನಿರೀಕ್ಷಕರಿಂದ ಸ್ಥಳೀಯ ತನಿಖೆ ನಡೆಸಿ ವರದಿ ಪಡೆದುಕೊಳ್ಳದೇ ಅನರ್ಹ ಫಲಾನುಭವಿಗಳಿಗೆ ಈ ಸೌಲಭ್ಯಗಳನ್ನು ಮಂಜೂರು ಮಾಡಿ ಅಕ್ರಮವೆಸಗಿರುತ್ತಾರೆ. ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಒಟ್ಟು 1,02,100/-ರಷ್ಟು ಆರ್ಥಿಕ ನಷ್ಟ ಉಂಟು ಮಾಡಿರುತ್ತಾರೆ.

ಕರ್ನಾಟಕ ಭೂಕಂದಾಯ ಕಾಯ್ದೆಯ ಅನುಚ್ಛೇದ 94(c) ಅಡಿಯಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ಮನೆ ಅಡಿಸ್ಥಳ ಮಂಜೂರು ಮಾಡುವ ಪ್ರಕರಣಗಳಲ್ಲಿ ಸದರಿ ಅಧಿಕಾರಿಯು ನಿಯಮಗಳಲ್ಲಿನ ವಿಧಿ ವಿಧಾನಗಳನ್ನು ಅನುಸರಿಸದೆ ಮಂಜೂರಾತಿ ಆದೇಶಗಳನ್ನು ಹೊರಡಿಸಿರುತ್ತಾರೆ. ಸ್ವಣಂದೂರು ಗ್ರಾಮಕ್ಕೆ ಸಂಬಂಧಿಸಿದ ಕಡತ ಸಂಖ್ಯೆ: HSD.R.558/00-01ರಲ್ಲಿ ಗ್ರಾಮಕರಣಿಕ ಮತ್ತು ಕಂದಾಯ ನಿರೀಕ್ಷಕರು ಮನೆ ನಿವೇಶನ ಮಂಜೂರಾತಿಗೆ ಶಿಫಾರಸ್ಸು ಮಾಡಿದ್ದರೂ ಸಹ ಸದರಿ ತಹಶೀಲ್ದಾರರು, ಅರ್ಜಿದಾರರು ಭೂಮೌಲ್ಯ ಪಾವತಿಸುವ ಸಾಮರ್ಥ್ಯ ಹೊಂದಿಲ್ಲವೆಂದು ಏಕಪಕ್ಷೀಯವಾಗಿ ನಿರ್ಧರಿಸಿ ಪ್ರಕರಣವನ್ನು ಮುಕ್ತಾಯ ಮಾಡಿರುತ್ತಾರೆ. ಅಲ್ಲದೆ, HSD.R.561/00-01ರ ಪ್ರಕರಣದಲ್ಲಿ ಅರ್ಜಿದಾರರು ಮೈಮೂನ ಕೋಂ. ಖಾಲಿದ್ ಇವರಾಗಿದ್ದು, ಗ್ರಾಮಕರಣಿಕ ಮತ್ತು ಕಂದಾಯ ನಿರೀಕ್ಷಕರು ಕೂಡ ಮೈಮೂನ ಹೆಸರಿಗೆ ನಿವೇಶನ ಮಂಜೂರಾತಿಗೆ ಶಿಫಾರಸ್ಸು ಮಾಡಿದ್ದರೂ ಸದರಿ ಶ್ರೀ ಬಿ. ಶಿವರುದ್ರಸ್ವಾಮಿ ಇವರು ಮೈಮೂನ ಹೆಸರಿಗೆ ಶಾಹಿ ಪೆನ್ನಿನಲ್ಲಿ ಸೊನ್ನೆಸುತ್ತಿ ಯಾವುದೇ ಅರ್ಜಿ ನೀಡದೇ ಇರುವ ಜುಬೇದಾ ಕೋಂ ಶರೀಫ್ ಎಂಬುವವರಿಗೆ ಸ್ಥಳ ಮಂಜೂರಾತಿ ನೀಡಿ ಹಕ್ಕುಪತ್ರ ನೀಡಿದ್ದು ಅದರಲ್ಲೂ ಕೂಡ ಅಪೊಲಿನ್ ಕೋಂ ಬೆಂಜಮಿನ್ ಎನ್ನುವವರ ಅರ್ಜಿಯ ಸಂಖ್ಯೆ: HSD.R.568/00-01 ಹಾಕಿ ನೀಡಿರುತ್ತಾರೆ. ಮುಂದುವರೆದು ಸದರಿ ಅಧಿಕಾರಿಯು ವಾಸ್ತವ್ಯೇತರ ಉದ್ದೇಶಗಳಿಗಾಗಿ ರಸ್ತೆ ಪೊರಂಬೊಕು ಅರಣ್ಯ ಜಮೀನುಗಳನ್ನು ಕೂಡ 94(c) ಅಡಿಯಲ್ಲಿ ಮಂಜೂರು ಮಾಡಿ ಭೂಕಂದಾಯ ಕಾಯ್ದೆಯನ್ನು ಉಲ್ಲಂಘಿಸಿ ಕಾರ್ಯನಿರ್ವಹಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ. ಶಿವರುದ್ರ ಸ್ವಾಮಿ, ತಹಶೀಲ್ದಾರ್, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರು ಅಧಿಕಾರ ದುರುಪಯೋಗ, ಕರ್ತವ್ಯಚ್ಯುತಿ, ನಿರ್ಲಕ್ಷ್ಯತನ ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿ ಬೇಜವಾಬ್ದಾರಿತನದಿಂದ ವರ್ತಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಸದರಿಯವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ, ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1204

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ದಿವಂಗತ ಖಾದರ್ ಪಾಷ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ದಾವಣಗೆರೆ ಇವರ ಭಾರತೀಯ ಜೀವವಿಮಾ ನಿಗಮದ ಪಾಲಿಸಿಗಳು ಲ್ಯಾಪ್ಸ್ ಆಗಲು ಕಾರಣರಾದ ಅಧಿಕಾರಿ:ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1. ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರಸಂ:ಕಂಪ್ಲೇಟ್ ಉಪಲೋಕ್:ಬಿಡಿ-229:01-02: ಡಿಆರ್ಇ-2 ದಿ.5-4-03.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:5-4-03ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಯುಕ್ತ, ಬೆಂಗಳೂರು ಇವರು ಶ್ರೀ ಕೆ. ಕಾಮೇಶ್ವರಚಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಓದೋ ಗಂಗಪ್ಪ, ಸಹಾಯಕ ಇಂಜಿನಿಯರ್, ಶ್ರೀ ಆರ್. ತಿಮ್ಮಬೋವಿ, ಪ್ರಥಮ ದರ್ಜೆ ಸಹಾಯಕ ಮತ್ತು ಶ್ರೀ ಎನ್. ರಂಗಪ್ಪ, ದ್ವಿತೀಯ ದರ್ಜೆ ಸಹಾಯಕ ಇವರುಗಳು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ದಾವಣಗೆರೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೃತರಾದ ಶ್ರೀ ಖಾದರ್ ಪಾಷ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರ ವೇತನದಿಂದ ಹಿಡಿದ ಎಲ್.ಐ.ಸಿ. ಪ್ರೀಮಿಯಮ್ ಮೊತ್ತವನ್ನು ಕಾಲಕಾಲಕ್ಕೆ ಎಲ್.ಐ.ಸಿ.ಗೆ ಪಾವತಿಸದೆ ಕರ್ತವ್ಯ ಲೋಪ, ಹಣ ದುರುಪಯೋಗ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬರುವುದರಿಂದ ಹಾಗೂ ಈ ಸಂಬಂಧವಾಗಿ ನೀಡಿರುವ ನೋಟಿಸ್‌ಗೆ ಅವರು ಒದಗಿಸಿರುವ ವಿವರಣೆ ಒಪ್ಪಲು ಸಾಧ್ಯವಿರುವುದಿಲ್ಲವೆಂದು ತಿಳಿಸುತ್ತಾ ಇವರುಗಳ ಈ ಕರ್ತವ್ಯ ನಿರ್ಲಕ್ಷ್ಯ ಹಾಗೂ ಹಣ ದುರುಪಯೋಗದ ಬಗ್ಗೆ ಶಿಸ್ತಿನ ಕ್ರಮ ಜರುಗಿಸಲು ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸುವಂತೆ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರನ್ವಯ ಮಾನ್ಯ ಲೋಕಾಯುಕ್ತರು ಶಿಫಾರಸ್ಸು ಮಾಡಿರುವುದಾಗಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ದಿನಾಂಕ:5-4-03ರಲ್ಲಿ ವರದಿ ಮಾಡುತ್ತಾ ಬರೆದಿರುವ ಪತ್ರದಲ್ಲಿ ತಿಳಿಸಿದ್ದಾರೆ.

ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಪ್ರಸ್ತುತ ಪ್ರಕರಣದಲ್ಲಿ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿ ಶ್ರೀ ಕೆ. ಕಾಮೇಶ್ವರಚಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಓದೋ ಗಂಗಪ್ಪ, ಸಹಾಯಕ ಇಂಜಿನಿಯರ್, ಶ್ರೀ ಆರ್. ತಿಮ್ಮಬೋವಿ, ಪ್ರಥಮ ದರ್ಜೆ ಸಹಾಯಕ ಮತ್ತು ಶ್ರೀ ಎನ್. ರಂಗಪ್ಪ, ದ್ವಿತೀಯ ದರ್ಜೆ ಸಹಾಯಕ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ದಾವಣಗೆರೆ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957ರ ನಿಯಮ 11 ರೆಡ್‌ವಿತ್ 13ರಂತೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಅದೇ ನಿಯಮಗಳ ನಿಯಮ 14(ಎ)ರೀತ್ಯಾ ಮಾನ್ಯ ಲೋಕಾಯುಕ್ತರಿಗೆ ವಹಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 11 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ಉಪವಿಭಾಗ, ದಾವಣಗೆರೆಯಲ್ಲಿದ್ದ ದಿವಂಗತ ಖಾದರ್ ಪಾಷ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ದಾವಣಗೆರೆ ಇವರ ವೇತನದಿಂದ ಹಿಡಿದ ಎಲ್.ಐ.ಸಿ. ಪ್ರೀಮಿಯಮ್ ಮೊತ್ತವನ್ನು ಕಾಲಕಾಲಕ್ಕೆ ಎಲ್.ಐ.ಸಿ.ಗೆ. ಪಾವತಿಸದೆ ಕರ್ತವ್ಯ ಲೋಪ, ಹಣ ದುರುಪಯೋಗ ಮಾಡಿರುವರೆಂಬ ಬಗ್ಗೆ ಹಾಗೂ ಅವರು ದುರ್ನಡತೆ ಎಸಗಿರುವರೆಂಬ ಬಗ್ಗೆ, ಶ್ರೀ ಕೆ.ಕಾಮೇಶ್ವರಚಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ಹಾಲಿ ನಿವೃತ್ತ), ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮ 214ರಂತೆ ಹಾಗೂ ಶ್ರೀ ಓದೋ ಗಂಗಪ್ಪ, ಸಹಾಯಕ ಇಂಜಿನಿಯರ್, (ಪ್ರಸ್ತುತ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪವಿಭಾಗ, ರಾಯಚೂರು), ಶ್ರೀ ಆರ್. ತಿಮ್ಮಬೋವಿ, ಪ್ರಥಮ ದರ್ಜೆ ಸಹಾಯಕ (ಹಾಲಿ ಲೆಕ್ಕ ಅಧೀಕ್ಷಕರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ) ಮತ್ತು ಶ್ರೀ ಎನ್. ರಂಗಪ್ಪ, ದ್ವಿತೀಯ ದರ್ಜೆ ಸಹಾಯಕ (ಹಾಲಿ ಪ್ರಥಮ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ , ಹರಿಹರ) ಇವರುಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11 ರೆಡ್‌ವಿತ್ 13ರಡಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಅದೇ ನಿಯಮಗಳ ನಿಯಮ 14(ಎ)ರನ್ವಯ ಮಾನ್ಯ ಲೋಕಾಯುಕ್ತರಿಗೆ ವಹಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1205

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಆಯ್ಕೆ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ:** ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಇವರ ಪತ್ರ ಸಂಖ್ಯೆ:ಆರ್:ಅಧೀಕ್ಷಕರು-3:ಯುಜಿ:ಸಿಬ್ಬಂದಿ:2003-2004, ದಿನಾಂಕ:9-9-2003.

**ಪ್ರಸ್ತಾವನೆ:**

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಕುಲಸಚಿವರು ಇವರ ಪತ್ರ ದಿ:9-9-2003ರ ಪತ್ರದಲ್ಲಿ 2003-2004ನೇ ಸಾಲಿನಲ್ಲಿ ಕೃಷಿಕರ ಹಾಗೂ ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು, ಆಯ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 147 ಕೃವಿವಿ 2003, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಮತ್ತು ಧಾರವಾಡ ಇಲ್ಲಿ ಕೃಷಿಕರಿಗೆ ಹಾಗೂ ಕೃಷಿಕರ ಮಕ್ಕಳಿಗೆ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಆಯ್ಕೆ ಸಮಿತಿಗಳನ್ನು 2003-2004ನೇ ಸಾಲಿನಿಂದ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

**ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ:-**

1) ಶಿಕ್ಷಣ ನಿರ್ದೇಶಕರು
ಕೃಷಿ ವಿಶ್ವವಿದ್ಯಾನಿಲಯ,
ಬೆಂಗಳೂರು.

2) ಜಂಟಿ ನಿರ್ದೇಶಕರು
(ವಿಸ್ತರಣೆ ಮತ್ತು ತರಬೇತಿ) ಕೃಷಿ ಇಲಾಖೆ
ಬೆಂಗಳೂರು.

3) ಜಂಟಿ ನಿರ್ದೇಶಕರು
(ಜಾನುವಾರು ಮತ್ತು ಅಭಿವೃದ್ಧಿ) ಪಶು ಸಂಗೋಪನೆ
ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ
ಕೇಂದ್ರ ಕಛೇರಿ, ಬೆಂಗಳೂರು.

**ಧಾರವಾಡ ಕೃಷಿ ವಿಶ್ವವಿದ್ಯಾನಿಲಯ:-**

1) ಶಿಕ್ಷಣ ನಿರ್ದೇಶಕರು
ಕೃಷಿ ವಿಶ್ವವಿದ್ಯಾನಿಲಯ ಧಾರವಾಡ.

2) ಜಂಟಿ ಕೃಷಿ ನಿರ್ದೇಶಕರು
ಕೃಷಿ ಇಲಾಖೆ, ಧಾರವಾಡ

3) ಜಂಟಿ ನಿರ್ದೇಶಕರು,
ಪಶು ಸಂಗೋಪನೆ ಮತ್ತು ಪಶು ವೈದ್ಯಕೀಯ
ಸೇವಾ ಇಲಾಖೆ, ಬೆಳಗಾಂ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 1206

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ಆರು ತಿಂಗಳ ನಂತರದ ಅಮಾನತ್ತಿನ ಅವಧಿಯ ಜೀವನಾಧಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಆದೇಶ ಕ್ರಮಾಂಕ ಸಿಆಸುಇ 52 ಎಸ್ಇಎನ್ 2002, ದಿನಾಂಕ: 24-4-2002.
2. ಆದೇಶ ಕ್ರಮಾಂಕ ಸಿಆಸುಇ 69 ಎಸ್ಇಎನ್ 2002, ದಿನಾಂಕ: 19-5-2003.

**ಪ್ರಸ್ತಾವನೆ:**

ಬೊಮ್ಮನಹಳ್ಳಿ ನಗರ ಸಭೆ, ಆಯುಕ್ತರಾಗಿದ್ದ ಆರ್. ಶ್ರೀನಿವಾಸ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಅವರನ್ನು ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾದಿಟ್ಟು ಮೇಲೆ (1)ರಲ್ಲಿ ಓದಲಾದ ದಿನಾಂಕ 24-4-2002ರ ಸರ್ಕಾರಿ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಯಿತು. ಅನಂತರ ಲೋಕಾಯುಕ್ತ ತನಿಖೆಯನ್ನು ಕಾದಿಟ್ಟು ಮೇಲೆ (2)ರಲ್ಲಿ ಓದಲಾದ ದಿನಾಂಕ 19-5-2003 ರಲ್ಲಿ ಅವರ ಅಮಾನತ್ತ ನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳಲಾಯಿತು. ಈ ಅಧಿಕಾರಿಯು ಅಮಾನತ್ತಿನಲ್ಲಿ 6 ತಿಂಗಳ ಅವಧಿಯನ್ನು ಮುಗಿಸಿದ 24-10-2002 ರಿಂದ ಜೀವನಾಧಾರ ಭತ್ಯೆಯನ್ನು ಪರಿಷ್ಕರಿಸಲು ನಿರ್ಧರಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 52 ಎಸ್ಇಎನ್ 2002, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98 (1) (i) ರನ್ವಯ ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ಅಮಾನತ್ತಿನ 6 ತಿಂಗಳ ನಂತರದ ಅವಧಿಗೆ ಅಂದರೆ 24-10-2002 ರಿಂದ 19-5-2003ರ ವರೆಗೆ ಅವರ ಮೂಲ ವೇತನದ ಶೇಕಡ 75 ರಷ್ಟು ಮೊತ್ತವನ್ನು ಜೀವನಾಧಾರ ಭತ್ಯೆಯನ್ನಾಗಿ ಪಾವತಿಸಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. 1207

## ಕಂದಾಯ ಸಚಿವಾಲಯ

**ವಿಷಯ:** ಭಾರತೀ ವಿದ್ಯಾ ಸಂಸ್ಥೆ, ಶನಿವಾರಸಂತೆ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುನೋಸೊ 2002, ದಿನಾಂಕ: 23.1.2003.
2. ಉಚ್ಚ ನ್ಯಾಯಾಲಯದ ರಿಟ್ ಅರ್ಜಿ 3644:2003 ರಲ್ಲಿ ಆದೇಶ ದಿನಾಂಕ: 6.2.2003.
3. ವಿಚಾರಣಾ ಪ್ರಾಧಿಕಾರದ ತೀರ್ಮಾನ ಕಂಇ 22 ಮುನೋಸೊ 2003, ದಿನಾಂಕ: 25.7.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಭಾರತೀ ವಿದ್ಯಾಸಂಸ್ಥೆ, ಶನಿವಾರಸಂತೆ ಈ ಸಂಸ್ಥೆ ಆಡಳಿತ ಮಂಡಳಿಯು ಹಲವಾರು ಅವ್ಯವಹಾರಗಳನ್ನು ಎಸಗಿರುವುದರಿಂದ ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಬೇಕೆಂಬ ಜಿಲ್ಲಾ ನೋಂದಣಾಧಿಕಾರಿ, ಕೊಡಗು ಜಿಲ್ಲೆ ಅವರ ವರದಿಯ ಆಧಾರದ ಮೇಲೆ ಸಂಸ್ಥೆಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಲಿಖಿತ ಹೇಳಿಕೆ ಪಡೆದು ದಿನಾಂಕ: 23.1.2003 ರಂದು ಆಡಳಿತಾಧಿಕಾರಿ ನೇಮಕ ಮಾಡಿ ಆದೇಶಿಸಲಾಗಿದೆ. ಸದರಿ ಆದೇಶದ ವಿರುದ್ಧ ಸಂಸ್ಥೆ ಅಧ್ಯಕ್ಷರು ಸಲ್ಲಿಸಿದ ರಿಟ್ ಅರ್ಜಿ 3644:2003 ರಲ್ಲಿ ದಿನಾಂಕ:6.2.2003 ರಂದು ತೀರ್ಪು ನೀಡಿ ಆಡಳಿತಾಧಿಕಾರಿ ನೇಮಕವನ್ನು ರದ್ದುಗೊಳಿಸಿ ಪ್ರಕರಣವನ್ನು ಪುನಃ ಸರ್ಕಾರಕ್ಕೆ ಹಿಂತಿರುಗಿಸಿ, ಸರ್ಕಾರವು ಜಾರಿ ಮಾಡಿದ ಕಾರಣ ಕೇಳುವ ನೋಟೀಸಿಗೆ ಸಂಸ್ಥೆಯು ನೀಡಿರುವ ಲಿಖಿತ ಹೇಳಿಕೆ ಹಂತದಿಂದ ಪ್ರಕರಣವನ್ನು ಕಾಯ್ದೆ 27-ಎ(1)(ಸಿ) ಪ್ರಕಾರ ಪುನರ್ ಪರಿಶೀಲಿಸಿ ಹಾಗೂ ಅರ್ಜಿದಾರ ಸಂಸ್ಥೆಯ ವಾದವನ್ನು ಆಲಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ನ್ಯಾಯಾಲಯವು ನಿರ್ದೇಶನ ನೀಡಿದ ಪ್ರಕಾರ ಓದಲಾದ (2)ರ ಪ್ರಕಾರ ವಿಚಾರಣಾ ಪ್ರಾಧಿಕಾರವಾದ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಅವರು ವಿಚಾರಣೆಗೆ ದಿನಾಂಕ: 16.4.2003 ರಂದು ನೋಟೀಸ್ ಹೊರಡಿಸಿ ಸಂಸ್ಥೆಯ ಅಧ್ಯಕ್ಷರು ಹಾಗೂ ಶ್ರೀ ಡಿ.ಕೆ. ಸುರೇಶ ಕುಮಾರ ಮತ್ತು ಶ್ರೀ ಎಸ್.ಕೆ. ವೀರಪ್ಪ ಅವರುಗಳಿಗೆ ಹಾಜರಾಗಲು ಸೂಚಿಸಲಾಯಿತು. ಅದರಂತೆ 16.4.2003 ರಂದು ವಿಚಾರಣೆಗೆ ಸಂಸ್ಥೆಯ ಸದಸ್ಯರಾದ ಶ್ರೀ ಡಿ.ಕೆ. ಸುರೇಶಕುಮಾರ್ ಮತ್ತು ಶ್ರೀ ಎಸ್.ಕೆ. ವೀರಪ್ಪ ಅವರುಗಳ ಪರವಾಗಿ ಅವರ ವಕೀಲರು ಹಾಜರಾಗಿದ್ದು, ಸಂಸ್ಥೆಯ ಅಧ್ಯಕ್ಷರ ಪರವಾಗಿ ಯಾರು ಹಾಜರಾಗಿಲ್ಲ. ಆದ್ದರಿಂದ ವಿಚಾರಣೆಯನ್ನು ದಿನಾಂಕ: 9.5.2003ಕ್ಕೆ ಮುಂದೂಡಿ ಸೂಚನಾ ಪತ್ರ ಜಾರಿ ಮಾಡಲಾಯಿತು. ದಿನಾಂಕ: 9.5.2003 ರಂದು ಪ್ರಕರಣವನ್ನು ಕರೆಯಲಾಗಿ ಸದಸ್ಯರುಗಳಾದ ಶ್ರೀ ಡಿ.ಕೆ. ಸುರೇಶಕುಮಾರ ಮತ್ತು ಶ್ರೀ ಎಸ್.ಕೆ. ವೀರಪ್ಪ ಇವರುಗಳು ಹಾಗೂ ಅವರುಗಳ ಪರವಾಗಿ ಅವರ ವಕೀಲರು ಹಾಜರಾಗಿರುತ್ತಾರೆ ಹಾಗೂ ಅವರುಗಳು ಲಿಖಿತ ತಕರಾರು ಮಂಡಿಸಿದ್ದಾರೆ. ಸಂಸ್ಥೆಯ ಅಧ್ಯಕ್ಷರಿಗೆ ನೋಂದಾಯಿತ ಅಂಚೆ ಮೂಲಕ ನೋಟೀಸ್ ಜಾರಿಯಾದ ಬಗ್ಗೆ ಸ್ವೀಕೃತಿ ಬಂದಿದೆ. ಆದರೆ ಅವರು ವಿಚಾರಣಾ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ತದನಂತರ ದಿನಾಂಕ: 20.5.2003 ರಂದು ಸಂಸ್ಥೆಯ ಅಧ್ಯಕ್ಷರ ವಕೀಲರು ಅಧ್ಯಕ್ಷರ ಪರವಾಗಿ ವಕಾಲತ್ ಪ್ರಮಾಣ ಪತ್ರ ಹಾಗೂ ಲಿಖಿತ ಹೇಳಿಕೆ ಸಲ್ಲಿಸಿ, ಜಿಲ್ಲಾ ನೋಂದಣಾಧಿಕಾರಿಗಳ ದಿನಾಂಕ: 18.4.2001 ಮತ್ತು 29.6.2002ರ ವರದಿಯ ಪ್ರತಿ ಒದಗಿಸಲು, ತಮಗೆ ವಾದವನ್ನು ಮಂಡಿಸುವ ಹಾಗೂ ಪಾಟೀ ಸವಾಲು ಮಾಡುವ ಅವಕಾಶ ಕಲ್ಪಿಸಬೇಕೆಂದು ಕೋರಿದ್ದಾರೆ. ಲಿಖಿತ ಹೇಳಿಕೆಯಲ್ಲಿ ಆಡಳಿತಾಧಿಕಾರಿ ನೇಮಕ ಮುನ್ನ ಜಿಲ್ಲಾ ನೋಂದಣಾಧಿಕಾರಿಗಳ ವರದಿಯ ಪ್ರತಿ ಒದಗಿಸಿರುವುದಿಲ್ಲ. ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ದಿನಾಂಕ:28.4.2002ರಂದು ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿ ಅಧಿಕಾರ ವಹಿಸಿಕೊಂಡಿದೆ. ದಿನಾಂಕ: 6.4.2002 ರಂದು

ಸಂಸ್ಥೆಗೆ 155 ಜನ ಸದಸ್ಯರನ್ನು ನೋಂದಾಯಿಸಿರುವುದು ನ್ಯಾಯಯುತವಾಗಿದೆ. ಸರ್ವಸದಸ್ಯರ ಸಭೆಯು ಪರಿಶೋಧಿತ ಲೆಕ್ಕಪತ್ರ ಅಂಗೀಕರಿಸಿದೆ. ಲೆಕ್ಕಪರಿಶೋಧನೆ ಮಾಡಿದ ಶ್ರೀ ಚಿಟ್ಟಿಯಪ್ಪ ಅವರು ಅಧಿಕೃತ ಲೆಕ್ಕ ಪರಿಶೋಧಕರಲ್ಲವೆಂದು ತಿಳಿದು ಬಂದಿದೆ. ಬೇರೆ ಅಧಿಕೃತ ಲೆಕ್ಕ ಪರಿಶೋಧಕರಿಂದ ಸಂಶೋಧಿಸಲು ಕ್ರಮ ಕೈಗೊಳ್ಳಲಾಯಿತು. ಸಂಸ್ಥೆಯಲ್ಲಿ ಯಾವುದೇ ಅವ್ಯವಹಾರ ನಡೆದಿಲ್ಲ ಆದ್ದರಿಂದ ಚುನಾಯಿತ ಆಡಳಿತ ಮಂಡಲಿಯು ಸಂಸ್ಥೆಯ ಆಡಳಿತ ನಡೆಸುವಂತೆ ಅನುವಾಗಲು ಸಂಸ್ಥೆಗೆ ಆಡಳಿತಾಧಿಕಾರಿ ನೇಮಿಸುವ ಕ್ರಮವನ್ನು ಕೈಬಿಡಬೇಕೆಂದು ಕೋರಿದ್ದಾರೆ. ಸಂಸ್ಥೆಯ ಅಧ್ಯಕ್ಷರಿಗೆ ದಿನಾಂಕ: 16.4.2003 ರಂದು ವಿಚಾರಣೆ ಹಾಜರಾಗುವಂತೆ ನೋಂದಾಯಿತ ಅಂಚೆಯಲ್ಲಿ ನೋಟೀಸು ನೀಡಿದಾಗ್ಯೂ ಅವರು ಹಾಜರಾಗಿಲ್ಲ. ನಂತರ ವಿಚಾರಣೆಯನ್ನು ದಿನಾಂಕ:9.5.2003ಕ್ಕೆ ಮುಂದೂಡಿ ಆ ದಿನ ವಿಚಾರಣೆಗೆ ಹಾಜರಾಗುವಂತೆ ಅವರಿಗೆ ನೋಂದಾಯಿತ ಅಂಚೆಯಲ್ಲಿ ಸೂಚನಾ ಪತ್ರ ಕಳುಹಿಸಿ ಕೊಡಲಾಯಿತು. ಈ ಸೂಚನೆ ಪತ್ರಗಳು ಅವರಿಗೆ ಜಾರಿಯಾಗಿದೆ. ಆದಾಗ್ಯೂ ಅವರು ದಿನಾಂಕ: 9.5.2003ರ ವಿಚಾರಣೆಗೆ ಹಾಜರಾಗಿಲ್ಲ ಅಥವಾ ಅವರ ಪರವಾಗಿ ವಾದ ಮಂಡಿಸಲು ಅವರ ವಕೀಲರು ಹಾಜರಾಗಿರುವುದಿಲ್ಲ ಕಾರಣ ಪ್ರಕರಣವನ್ನು ಆದೇಶಕ್ಕಾಗಿ ಕಾಯ್ದಿರಿಸಲಾಯಿತು. ಸಂಸ್ಥೆಯ ಅಧ್ಯಕ್ಷರಿಗೆ ಅಹವಾಲು ಮಂಡಿಸಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆ ಮತ್ತು ಅವರು ದಿನಾಂಕ: 20.5.2003 ರಂದು ಸಲ್ಲಿಸಿದ ಮನವಿಯನ್ನು ಗಣನೆಗೆ ತೆಗೆದುಕೊಳ್ಳದೆ ಪ್ರಕರಣವನ್ನು ಪರಿಶೀಲಿಸಿದಾಗ ಜಿಲ್ಲಾ ನೋಂದಣಾಧಿಕಾರಿಗಳು, ಕೊಡಗು ಜಿಲ್ಲೆ ಅವರು ಸರ್ಕಾರಕ್ಕೆ ದಿನಾಂಕ:18.4.2002 ಮತ್ತು 29.6.2002 ರಂದು ಸಲ್ಲಿಸಿದ ವರದಿಗಳನ್ನು ಸಂಸ್ಥೆಯ ಅಧ್ಯಕ್ಷರ ಲಿಖಿತ ಹೇಳಿಕೆಯನ್ನು ಹಾಗೂ ಸಂಸ್ಥೆ ಸದಸ್ಯರಾದ ಶ್ರೀ ಡಿ.ಕೆ. ಸುರೇಶ ಕುಮಾರ ಇವರು ಸಲ್ಲಿಸಿದ ಮನವಿಗಳನ್ನು ಪ್ರಾಧಿಕಾರವು ಪರಿಶೀಲಿಸಿತು. ದಿನಾಂಕ: 28.4.2002 ರಂದು ನಡೆದ ಮಹಾ ಸಭೆಯಲ್ಲಿ ಚುನಾವಣೆ ನಡೆದಿರುವುದು ದೃಢಪಟ್ಟಿದೆ. ಸಂಸ್ಥೆಯು 1985 ರಿಂದ 2002 ರವರೆಗೆ ಸುಮಾರು 17 ವರ್ಷಗಳ ಕಾಲ ಸಂಸ್ಥೆಯ ಆಡಳಿತ ಮಂಡಳಿಯು ಮಹಾ ಸಭೆಯನ್ನು ನಡೆಸದೆ ನಿಯಮ ಬಾಹಿರವಾಗಿ ಆಡಳಿತ ನಡೆಸಿರುವುದು ಕಂಡು ಬರುತ್ತದೆ. ದಿನಾಂಕ:7.9.2002 ರಂದು ಸಂಸ್ಥೆಯ ಅಧ್ಯಕ್ಷರು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ಉಚ್ಚ ನ್ಯಾಯಾಲಯದಲ್ಲಿ ವ್ಯಾಜ್ಯ ಇದ್ದು ತಡೆಯಾಜ್ಞೆ ಇದ್ದುದರಿಂದ 1986 ರಿಂದ 2001 ರವರೆಗೆ ಮಹಾಸಭೆ ಮತ್ತು ಚುನಾವಣೆ ನಡೆಸಲಾಗಿಲ್ಲ ಎಂದು ತಿಳಿಸಿದ್ದಾರೆ. ಆದರೆ ಇಷ್ಟು ವರ್ಷಗಳ ಕಾಲ ನ್ಯಾಯಾಲಯದಲ್ಲಿ ವ್ಯಾಜ್ಯ ಇದ್ದು ತಡೆಯಾಜ್ಞೆ ಇದ್ದ ಬಗ್ಗೆ ಅವರು ಯಾವುದೇ ದಾಖಲೆ ಹಾಜರುಪಡಿಸಿರುವುದಿಲ್ಲ ಕಾರಣ ಅವರ ಮನವಿ ನಂಬಲರ್ಹವಾದುದಲ್ಲ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯಲ್ಲಿ ಹೇಳಿರುವಂತೆ ಆಡಳಿತ ಮಂಡಳಿಯು ಏಕ ಪಕ್ಷೀಯವಾಗಿ ತಮ್ಮ ಆಪ್ತರು ಹಾಗೂ ನೆಂಟರಿಷ್ಟರಾದ 155 ಜನರನ್ನು ಚುನಾವಣೆಗೆ ಸ್ವಲ್ಪ ದಿನ ಇರುವಾಗ ನೋಂದಾಯಿಸಿಕೊಂಡಿರುವುದು ಸಂಶಯಕ್ಕೆ ಎಡೆ ಮಾಡಿಕೊಟ್ಟಿದೆ. ಇದರಿಂದ ಸಂಸ್ಥೆಯ 2 ಗುಂಪುಗಳಲ್ಲಿ ಪರಸ್ಪರರನ್ನು ನಿಂದಿಸುತ್ತಾ ಪರಿಸ್ಥಿತಿ ಅತಿ ಉದ್ರೇಕಗೊಂಡು ಇದು ಮುಂದುವರೆಯುವುದು ಸರಿಯಲ್ಲವೆಂದು, ಜಿಲ್ಲಾ ನೋಂದಣಾಧಿಕಾರಿಗಳು ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿದ್ದಾರೆ. ವಿಚಾರಣಾ ಪ್ರಾಧಿಕಾರವು ವಿಚಾರಣೆಯಲ್ಲಿ ಎಲ್ಲ ಅಂಶಗಳನ್ನು ಪರಿಶೀಲಿಸಿ ಈ ಸಂಸ್ಥೆಯು ನಿಯಮಗಳ ಪ್ರಕಾರ ತನ್ನ ಕಾರ್ಯ ಚಟುವಟಿಕೆ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದೆ ಎಂದು ಅಲ್ಲದೆ ಸಂಸ್ಥೆಯಲ್ಲಿ ಬಹಳಷ್ಟು ಗುಂಪುಗಾರಿಕೆ ಹಾಗೂ ಒಳಜಗಳ ಇದ್ದು ಇದು ಸಂಸ್ಥೆಯು ನಡೆಸುತ್ತಿರುವ ವಿದ್ಯಾ ಸಂಸ್ಥೆ ನಡೆಸುತ್ತಿರುವ ಆಗುಹೋಗುಗಳಿಗೆ ತೊಂದರೆ ಉಂಟಾಗುವ ಸಂಭವವಿದೆ ಎಂದು ಅಭಿಪ್ರಾಯ ಪಡುತ್ತಾ, ಸಂಸ್ಥೆಯ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿಕೊಂಡು ಸೌಹಾರ್ದಯುತ ವಾತಾವರಣದಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ವಹಿಸಿಕೊಟ್ಟು ಸಂಸ್ಥೆಯ ಆಡಳಿತ ಸುಗಮವಾಗಿ ನಡೆದುಕೊಂಡು ಹೋಗುವಂತೆ ಅವಶ್ಯಕವೆಂದು ವಿಚಾರಣಾ ಪ್ರಾಧಿಕಾರ ಅಭಿಪ್ರಾಯ ಪಟ್ಟು ಜಿಲ್ಲಾ ನೋಂದಣಾಧಿಕಾರಿ, ಕೊಡಗು ಜಿಲ್ಲೆ ಅವರು ದಿನಾಂಕ:18.4.2002 ಮತ್ತು 29.6.2002 ರಂದು ಸರ್ಕಾರಕ್ಕೆ ಸಲ್ಲಿಸಿದ ವರದಿಗಳನ್ನು ಪ್ರಾಧಿಕಾರವು ಒಪ್ಪಿ, ಸರ್ಕಾರವು ಜಾರಿ ಮಾಡಿದ ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಹೇಳಿಕೆ ಅಂಗೀಕಾರಾರ್ಹವಲ್ಲವೆಂದು ನಿರ್ಣಯಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ (1)(ಸಿ) ಪ್ರಕಾರ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ನೇಮಕ ಮಾಡುವ ಅವಶ್ಯಕತೆಯಿದೆ ಎಂದು ವಿಚಾರಣಾ ಪ್ರಾಧಿಕಾರವು ಅಭಿಪ್ರಾಯ ಪಟ್ಟಿದೆ.

ನ್ಯಾಯಾಲಯದ ಆದೇಶದಂತೆ ವಿಚಾರಣೆ ನಡೆಸಿದ ಪ್ರಾಧಿಕಾರದ ಅಭಿಪ್ರಾಯದಂತೆ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುನೋಸೊ 2002, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ 3644:2003 ರಲ್ಲಿ ದಿನಾಂಕ:6.2.2003 ರಂದು ನೀಡಿದ ಆದೇಶದಂತೆ ಭಾರತೀ ವಿದ್ಯಾ ಸಂಸ್ಥೆ, ಶನಿವಾರಸಂತೆ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಸಂಸ್ಥೆ ಕುರಿತ ವಿಚಾರಣೆ ನಡೆಸಿದ ಪ್ರಾಧಿಕಾರವು, ಸದರಿ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಅವಶ್ಯಕವೆಂದು ಅಭಿಪ್ರಾಯಪಟ್ಟ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ (1)(ಸಿ) ಪ್ರಕಾರ ಉಪ ಕಾರ್ಯದರ್ಶಿ, ಕೊಡಗು ಜಿಲ್ಲಾ ಪಂಚಾಯತ್ (ಆಡಳಿತ), ಕೊಡಗು ಜಿಲ್ಲೆ, ಮಡಿಕೇರಿ ಅವರನ್ನು 6 ತಿಂಗಳ ಅವಧಿಗೆ ಅಥವಾ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1208

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಬಾಂಬೆ ಮರ್ಜಡ್ ಟೆರಿಟರೀಸ್ ಅಂಡ್ ಎರಿಯಾಸ್ (ಜಾಗಿರ್ಸ್ ಅಬಾಲಿಷನ್) ಕಾಯ್ದೆ 1953 (ಬಾಂಬೆ ಕಾಯ್ದೆ ನಂ: 22:1955) ನೇದ್ದ ರಡಿಯಲ್ಲಿ ನಿಹಿತಗೊಳಿಸಿದ ಜಮೀನುಗಳ ಕುರಿತಂತೆ ಶ್ರೀ ಸಿದ್ದಗೌಡ ಖಾನಗೌಡ ದೇಸಾಯಿ ಇವರಿಗೆ ಪರಿಹಾರ ಧನ ಸಂದಾಯ ಮಾಡುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ:ಕಂಶಾ:ವತನ:ವಿವ:94:2001-02 ದಿನಾಂಕ:27-2-02, 18-9-2002 ಮತ್ತು 7-1-03.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ, ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂರವರು ದಿ.ಬಾಂಬೆ ಮರ್ಜಡ್ ಟೆರಿಟೋರಿಸ್ ಅಂಡ್ ಎರಿಯಾಸ್ (ಜಾಗಿರ್ಸ್ ಅಬಾಲಿಷನ್) ಕಾಯ್ದೆ, 1953 (ಬಾಂಬೆ ಕಾಯ್ದೆ ನಂ:22-1955)ರ ರದ್ದತಿಯಾದ ನಂತರ ಉಪ ವಿಭಾಗಾಧಿಕಾರಿ, ಬೆಳಗಾಂ ರವರು ಆದೇಶ ಸಂಖ್ಯೆ:ಎಂಪಿ: ವಿಸ್‌ಆರ್, 42, ದಿನಾಂಕ: 20-2-1982 ರನ್ವಯ ಶ್ರೀ ಸಿದ್ದನಗೌಡ ಖಾನಗೌಡ ದೇಸಾಯಿ ಸಾ: ಬಂಬರಗಾ, ತಾ: ಬೆಳಗಾವಿ ಇವರಿಗೆ ಪರಿಹಾರ ಧನ ಮಂಜೂರು ಮಾಡಿದ್ದು, ಈ ಹಣವನ್ನು ಲೆಕ್ಕ ಶೀರ್ಷಿಕೆ "92 ಪೇಮೆಂಟ್ ಆಫ್ ಕಾಂಪನ್ಸೇಷನ್ ಟು ದಿ ಹೋಡಿಸ್ ಆಫ್ ದಿ ಅಬಾಲಿಷನ್" ಖಾತೆಗೆ ಭರಣ ಮಾಡಿಕೊಂಡು ಖರ್ಚು ಹಾಕಲು ಅವರಿಗೆ ಲೆಕ್ಕ: ಶೀರ್ಷಿಕೆ " 4515-00-103-1-01-100" ಅಡಿಯಲ್ಲಿ ರೂ. 33,613-00 ಭೂ ಪರಿಹಾರ ಹಾಗೂ ಅದರ ಮೇಲೆ ದಿನಾಂಕ: 1-8-1955 ರಿಂದ ಅವಾರ್ಡ್ ಮಾಡಿದ ದಿನಾಂಕದವರೆಗೆ ಅಂದರೆ ದಿನಾಂಕ: 20-2-1982 ರವರೆಗೆ ಶೇಕಡ 3 ರಂತೆ ಬಡ್ಡಿ ರೂ.25,688-32 ಹೀಗೆ ಒಟ್ಟು ರೂ.59,301-00ಗಳ (ರೂಪಾಯಿ ಐವತ್ತೊಂಬತ್ತು ಸಾವಿರದ ಮುನ್ನೂರ ಒಂದು) ಅನುದಾನವನ್ನು ಬಿಡುಗಡೆ ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂರವರ ಬೇಡಿಕೆಯನ್ನು ಪರಿಶೀಲಿಸಿದ ಸರ್ಕಾರ ಸದರಿ ಅನುದಾನ ಬಿಡುಗಡೆ ಮಾಡುವುದು ಉಚಿತ ಎಂದು ತಿಳಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಆದೇಶ ಸಂಖ್ಯೆ: ಕಂಇ 83 ಎಲ್‌ಆರ್‌ಎ 2002, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ದಿ.ಬಾಂಬೆ ಮರ್ಜಡ್ ಟೆರಿಟೋರಿಸ್ ಮಿಸಲೇನಿಯಸ್ ಅಬಾಲಿಷನ್ ಕಾಯ್ದೆ 1955 (ಬಾಂಬೆ ಕಾಯ್ದೆ ನಂ: 22-1955 ರದ್ದಿಯಾತಿ ನಂತರ ಉಪ ವಿಭಾಗಾಧಿಕಾರಿ, ಬೆಳಗಾಂರವರು ಆದೇಶ ಸಂಖ್ಯೆ: ಎಂಪಿ:ವಿಸ್‌ಆರ್ 42, ದಿನಾಂಕ: 20-2-1982 ರನ್ವಯ ಶ್ರೀ ಸಿದ್ದನಗೌಡ, ಖಾನಗೌಡ ದೇಸಾಯಿ ಸಾ: ಬಂಬರಗಾ ತಾ: ಬೆಳಗಾವಿ ಇವರಿಗೆ ಪರಿಹಾರ ಧನ ಮಂಜೂರು ಮಾಡಿದ್ದು, ಈ ಹಣವನ್ನು ಲೆಕ್ಕ ಶೀರ್ಷಿಕೆ "92 ಪೇಮೆಂಟ್ ಆಫ್ ಕಾಂಪನ್ಸೇಷನ್ ಟು ದಿ ಹೋರ್ಡಿಸ್ ಆಫ್ ದಿ ಅಬಾಲಿಷನ್" ಖಾತೆಗೆ ಭರಣಮಾಡಿಕೊಂಡು ಖರ್ಚು ಹಾಕಲು ಅವರಿಗೆ ಲೆಕ್ಕ ಶೀರ್ಷಿಕೆ "4515-00-103-1-01-100 ಅಡಿಯಲ್ಲಿ ರೂ. 33,613-00 ಭೂ ಪರಿಹಾರ ಹಾಗೂ ಅದರ ಮೇಲೆ ದಿನಾಂಕ' 1-8-55 ರಿಂದ ಅವಾರ್ಡ್ ಮಾಡಿದ ದಿನಾಂಕದವರೆಗೆ ಅಂದರೆ ದಿನಾಂಕ: 20-2-1982 ರವರೆಗೆ ಶೇಕಡ 3 ರಂತೆ ಬಡ್ಡಿ ರೂ.25,688-32 ಹೀಗೆ ಒಟ್ಟು ರೂ.59,301-00 ಗಳ (ಐವತ್ತೊಂಬತ್ತು ಸಾವಿರದ ಮುನ್ನೂರ ಒಂದು ರೂಪಾಯಿಗಳು) ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದು ಅದರಂತೆ ಸರ್ಕಾರವು ಆದೇಶ ಹೊರಡಿಸಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆ.ಇ.566 ವೇ.7.03 ದಿನಾಂಕ: 12-5-03ರಲ್ಲಿ ನೀಡಿದ ಸಹಮತಿ ಅನುಸರಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1209

**ವಿ. ರಾಧಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸು)

**ವಿಷಯ:** ಟಾಗೋರ ಸ್ಮಾರಕ ಶಿಕ್ಷಣ ಸಂಸ್ಥೆ ರಾಯಚೂರು ಜಿಲ್ಲೆ ರಾಯಚೂರು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (p) ದಿನಾಂಕ: 13.02.2002.
2. ಸಹಾಯಕ ಆಯುಕ್ತರು, ರಾಯಚೂರು ಹಾಗೂ ಆಡಳಿತಾಧಿಕಾರಿ ಟಾಗೋರ ಸ್ಮಾರಕ ಶಿಕ್ಷಣ ಸಂಸ್ಥೆ ರಾಯಚೂರು ಇವರ ಪತ್ರ ಸಂಖ್ಯೆ:ಕಂದಾಯ ಆಡಳಿತ/87/2001-2002 ದಿನಾಂಕ:04-07-2003

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಟಾಗೋರ ಸ್ಮಾರಕ ಶಿಕ್ಷಣ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ವರದಿ ನೀಡಿ ಸಂಸ್ಥೆಯ ಪ್ರಕರಣವು ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿ ವಿಚಾರಣೆಯ ಹಂತದಲ್ಲಿ ಇರುತ್ತದೆ. ನ್ಯಾಯಾಂಗ ಪ್ರಕರಣ ಇತ್ಯರ್ಥಗೊಳ್ಳುವವರೆಗೆ ಸಂಸ್ಥೆಗೆ ಚುನಾವಣೆ ನಡೆಸಲು ಬರುವುದಿಲ್ಲವಾದ್ದರಿಂದ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿದ್ದಾರೆ. ಆಡಳಿತಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (P), ಬೆಂಗಳೂರು,ದಿನಾಂಕ: 12ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯಿದೆ 1960ರ ಕಲಂ 27 ಎ ಪ್ರಕಾರ ಟಾಗೋರ ಸ್ಮಾರಕ ಶಿಕ್ಷಣ ಸಂಸ್ಥೆ ರಾಯಚೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ದಿನಾಂಕ:13.08.2003 ರಿಂದ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1210

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಮಂಜುಳ ಮಕ್ಕಳ ಕೇಂದ್ರ, ಮಾಗಡಿ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ನೇಮಕ ಮಾಡಿದ್ದ ಆಡಳಿತಾಧಿಕಾರಿ ಬದಲಾವಣೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಮುನೊಸೊ 2002, ದಿನಾಂಕ: 21-4-2003.
2. ಆಡಳಿತಾಧಿಕಾರಿಗಳ ಪತ್ರ ಸಂಖ್ಯೆ:ಎಸ್‌ಎಲ್‌ಐಸಿಆರ್:47:2003-04, ದಿನಾಂಕ:8-7-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ದಿನಾಂಕ:21-4-2003ರ ಆದೇಶದಲ್ಲಿ ಮಂಜುಳ ಮಕ್ಕಳ ಕೇಂದ್ರ, ಮಾಗಡಿ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ತಹಶೀಲ್ದಾರ್ (ದಕ್ಷಿಣ) ಬೆಂಗಳೂರು ಅವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಲಾಗಿದೆ. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ವರದಿ ಸಲ್ಲಿಸಿ ಪ್ರಕರಣವು ಬೆಂಗಳೂರು ಉತ್ತರ ತಾಲ್ಲೂಕು ತಹಶೀಲ್ದಾರ್ ಅವರ ವ್ಯಾಪ್ತಿಗೆ ಬರುತ್ತದೆ ಅಲ್ಲದೆ ತಮಗೆ ಕಾರ್ಯದ ಒತ್ತಡ ಹೆಚ್ಚಿಗೆ ಇರುವುದರಿಂದ ತಮ್ಮ ಬದಲಿಗೆ ಬೆಂಗಳೂರು ಉತ್ತರ ತಾಲ್ಲೂಕ್ ತಹಶೀಲ್ದಾರ್‌ರನ್ನು ಆಡಳಿತಾಧಿಕಾರಿಯಾಗಿ ನೇಮಿಸಲು ಕೋರಿದ್ದನ್ನು ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಮುನೊಸೊ 2002, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಮಂಜುಳ ಮಕ್ಕಳ ಕೇಂದ್ರ, ಮಾಗಡಿ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ದಿನಾಂಕ:21-4-2003ರಂದು ಆಡಳಿತಾಧಿಕಾರಿಯಾಗಿ ನೇಮಕವಾಗಿದ್ದ, ತಹಶೀಲ್ದಾರ್ ಬೆಂಗಳೂರು ದಕ್ಷಿಣ ತಾಲ್ಲೂಕ್ ಇವರ ಬದಲಿಗೆ ಬೆಂಗಳೂರು ಉತ್ತರ ತಾಲ್ಲೂಕ್ ತಹಶೀಲ್ದಾರ್‌ರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

ಆಡಳಿತಾಧಿಕಾರಿಗಳು, ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1211

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ನಾಗಣ್ಣ, ಉಪ ನೋಂದಣಾಧಿಕಾರಿ, ಚಾಮರಾಜನಗರ ಇವರ ವಿರುದ್ಧ ಅಕ್ರಮ ಸಂಭಾವನೆ ಸ್ವೀಕಾರ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಮಾನ್ಯ ಲೋಕಾಯುಕ್ತ ಅವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: Compt/Uplok/Mys-127/ 2000-01, ದಿನಾಂಕ:21.12.2002.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ತಮ್ಮ ಅರೆ ಸರ್ಕಾರಿ ಪತ್ರದೊಂದಿಗೆ ಮಾನ್ಯ ಲೋಕಾಯುಕ್ತರವರು ಲೋಕಾಯುಕ್ತ ತನಿಖಾಧಿಕಾರಿಗಳಿಗೆ ದಿನಾಂಕ:31.1.2000ರ ವರದಿಯ ಮೇಲೆ ತಮ್ಮ ಅಭಿಪ್ರಾಯದ ವರದಿಯನ್ನು ಕಳುಹಿಸುತ್ತಾ, ಈ ಪ್ರಕರಣದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರ ಪ್ರಕಾರ ಕಳುಹಿಸಿರುವ ವರದಿಯ ಮೇಲೆ ಕ್ರಮ ಜರುಗಿಸಿ ವರದಿ ನೀಡಲು ಕರ್ನಾಟಕ ಲೋಕಾಯುಕ್ತ ನಿಯಮ 12(4)ರ ಪ್ರಕಾರ ಪ್ರಕರಣವನ್ನು ಕಳುಹಿಸಿರುತ್ತಾರೆ.

ಶ್ರೀ ನಾಗಣ್ಣ, ಉಪ ನೋಂದಣಾಧಿಕಾರಿ, ಚಾಮರಾಜನಗರ ಉಪ ನೋಂದಣಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಅಸ್ಲಾಮ್ ಪಾಷಾ, ರಹಮತ್ ನಗರ, ಸತ್ತಿರೋಡ್, ಚಾಮರಾಜನಗರ ಪಟ್ಟಣ ಅವರು ತಮ್ಮ ಚಿಕ್ಕಮ್ಮ ಅವರ ಜಮೀನು ಮಾರಾಟ ಕ್ರಯ ಪತ್ರ ಮಾಡಿಸುವಾಗ 1,000/- ರೂ.ಗಳ ಅಕ್ರಮ ಸಂಭಾವನೆ ಪಡೆದಿದ್ದಾರೆಂಬ ಆರೋಪದ ಮೇಲೆ ಕಳುಹಿಸಿದ ಆರೋಪವು ಮಾನ್ಯ ಲೋಕಾಯುಕ್ತ ವರದಿಯಲ್ಲಿ ಮೇಲ್ನೋಟಕ್ಕೆ ಸಾಬೀತಾಗಿದ್ದು, ಈ ಬಗ್ಗೆ ತೆಗೆದುಕೊಂಡ ಸಮಜಾಯಿಷಿಯಲ್ಲಿ, ಲೋಕಾಯುಕ್ತರವರು ಮಾಡಿದ ಆಪಾದನೆಯನ್ನು ಆಪಾದಿತ ನೌಕರರು ಅಲ್ಲಗಳೆದಿದ್ದು, ಅಲ್ಲದೆ ಆರೋಪಿತರು ನೀಡಿರುವ ಸಮಜಾಯಿಷಿಯು ತೃಪ್ತಿಕರವಾಗಿ ಕಂಡುಬಾರದ ಕಾರಣ ಮಾನ್ಯ ಲೋಕಾಯುಕ್ತರವರು ವ್ಯಕ್ತಪಡಿಸಿ, ತನಿಖೆ ಸಮಯದಲ್ಲಿ ಸಂಗ್ರಹಿಸಿದ ಸಾಕ್ಷಿ ಪುರಾವೆಗಳ ಆಧಾರದ ಮೇಲೆ ಆರೋಪಿತ ನೌಕರರಾದ ಶ್ರೀ ನಾಗಣ್ಣ, ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಚಾಮರಾಜನಗರ ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಕಾಯ್ದೆ 1985ರ ನಿಯಮ 12(4) ರಡಿಯಲ್ಲಿ ಸಲ್ಲಿಸಿರುವ ಪ್ರಕರಣದ ಮೇಲೆ ಕ್ರಮ ಜರುಗಿಸುವ ಕುರಿತು ಮಾನ್ಯ ಲೋಕಾಯುಕ್ತ, ಬೆಂಗಳೂರು ರವರ ದಿನಾಂಕ:20.12.2002 ವರದಿಯನ್ನು ಪರಿಶೀಲಿಸಿ, ಸತ್ಯಾಸತ್ಯತೆಯನ್ನು ಕಂಡುಹಿಡಿಯುವ ಕುರಿತು ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಂಇ 7 ಮುನೋಸೇ(2) 2000, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಪಿತ ನೌಕರರಾದ ಶ್ರೀ ನಾಗಣ್ಣ, ಉಪ ನೋಂದಣಾಧಿಕಾರಿ, ಚಾಮರಾಜನಗರ ಉಪ ನೋಂದಣಿ ಕಛೇರಿ ಇವರ ವಿರುದ್ಧ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14-ಎ ರಂತೆ ನಿಯಮ 11 ರೊಂದಿಗೆ ನಿಹಿತವಾಗಿರುವಂತೆ ಇರುವ ಅಧಿಕಾರದನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1212

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**KARNATAKA GOVERNMENT SECRETARIAT**

**Sub:** Drought relief : Package of relief measures for revival of agricultural operations.

**PREAMBLE:**

Widespread drought in Karnataka for third successive year has caused severe and unprecedented distress and hardship to farmers. State Government has undertaken large scale relief measures for providing employment, supply of drinking water, fodder for cattle, etc. However, urgent relief measures are also necessary to revive agricultural economy and enable the drought affected farmers and the related institutions to restart their operations.

2. Accordingly, a Committee under the chairmanship of the Hon'ble Minister for Co-operation was constituted for suggesting a package of relief measures. The committee has proposed a package of relief measures including waiver of certain dues, a package for rabi 2002 and a package of incentives/market operations which is expected to cost about Rs.880.00 crores.

3. Government has examined the package of relief measures proposed by the Committee in detail at the highest level. In view of present distress situation of the farmers due to drought, the Govt. has decided to accept the package. The cost of the package is estimated at about Rs.880.00 crores of which State Govt's share is to be provided in the current year's budget. For this purpose, it would be necessary to enforce strict economy/austerity measures to curtail Govt. expenditure. Separate orders will be issued by Finance Dept, regarding these economy/austerity measures.

**Govt. Order No. CD 107 CLS 2003, Bangalore, Dated: 3rd September 2003**

4. Government of Karnataka are pleased to announce the following package of relief measures for reviving agricultural economy affected by continuous drought in the State and for providing immediate relief to farmers and related institutions to enable them to restart their operations:

| Sl. No. | Relief | Estimated provision of relief (Rs.in crores) | Concerned Administrative Department |
|---|---|---|---|
| 1 | 2 | 3 | 4 |
| | **A. Co-operative Short-Term loans:** | | |
| 1. | Waiver of interest on co-operative Short Term Loans for Rabi 2002 (for all taluks in the State) | 40.30 | Co-operation |
| 2. | There shall be no penal interest on short-term agricultural loans by Co-operatives in future | | " |
| | **B. Co-operative Medium/Long Term loans:** | | |
| 3. | Revival of KCC Bank, Dharwad<br>The existing interest of crop and medium term agricultural loans to be waived in full, subject to realization of principal amount. The loss will be made good by the Government, Apex Bank and DCC Bank including PACS in the ratio of 50:25:25 | 25.00 | " |
| 4. | Share capital assistance to DCC Bank, Gulbarga | 3.00 | " |
| 5. | Rebate on Current interest for Long term loans to the farmers at the rate of 5.5 percent to be reimbursed by the Govt. provided the farmers pay the remaining interest at 9 percent. | 33.00 | " |
| 6. | Waiver of entire current year's interest on Long term loans of Horticulture crops viz, Grape, Pomegranate and lime. | 20.00 | " |
| 7. | To write off outstanding loans and interest for failed wells | 22.00 | " |
| | **C. Input Subsidy:** | | |
| 8. | Seed Subsidy for Rabi 2003:<br>Seeds for Rabijowar, Ragi, Bengal gram, Maize and Sunflower will be provided to all the small and marginal farmers across the State at 50 percent subsidy | 20.00 | Agriculture & Horticulture |

| 1 | 2 | 3 | 4 |
|---|---|---|---|
| 9. | Supply of Agri-Gold fertilizer:<br>50 percent subsidy on Agri-Gold.<br>The quantity to be worked out on the basis of 250 kgs. Per hectare subject to a maximum of one hectare (250 kgs) per beneficiary | 2.25 | " |
| 10. | Package for supply of planting material for Horticultural Crops:<br>Supply of planting material. The entitlement to be worked out at the rate of Rs.1000/- per hectare for small and marginal farmers across the State restricted to one hectare (Rs.1,000/-) per small and marginal farmer | 10.00 | " |
| | **D. Price Support:** | | |
| 11. | Minimum support operations to be taken up for Soyabean, Maize and Sunflower by Agricultural Marketing Department in collaboration with NAFED, Marketing Federation etc., and to open purchase centres well in advance for the first harvest<br>Funds will be released only when needed by Dept. of Agricultural Marketing after utilization of their own funds. Rs.80.00 crores. | 200.00 | Agricultural Marketing |
| | **E. Remissions:** | | |
| 12. | Land Revenue remission for 2002-2003 | 3.50 | Revenue |
| 13. | Full Remission of Water rate and maintenance cess for the year 2002-03. Penal rates for violation of cropping pattern and unauthorized cultivation reduced to 50% | 107.00 | Water Resources |
| 14. | Waiver of interest in full on the outstanding farm development loans extended by CADAs | 10.00 | " |
| | **F. Power:** | | |
| 15. | KPTCL<br>The outstanding KPTCL dues as on 31.3.2001 in respect of irrigation pumpsets to be fully waived | 331.00 | Engery |
| 16. | Rationalisation of Power Tariff in Malnad Districts | 15.00 | " |
| | **G. Sugarcane:** | | |
| 17. | Export subsidy at Rs.1,000/-per ton of sugar, restricted to 2 lakh tonnes of sugar exports only will be extended to 42 factories which owe cane dues to the farmers. These funds will be used strictly for settling the farmers' dues | 20.00 | Sugar |
| 18. | Creation of Sugar Development Fund with a contribution from farmers at the rate of Rs.10 per ton of sugarcane with a matching Government contribution of Rs.10 per ton of sugarcane crushed (State Contribution to the Fund in 2003-2004) | 16.00 | " |
| | **H. Fisheries:** | | |
| 19. | To extend the leasing of tanks for fishermen for one more year | | Animal Husbandry & Fisheries Dept |

5. Government of Karnataka would have to impose budget cuts/economy measures to reduce Govt. expenditure and mobilize funds to meet the above expenditure. Separate G.O. will be issued by Finance Department on the subject.

6. The respective Deputy Commissioners of Districts shall co-ordinate and review the implementation of the package at the District level. Pr.Secretaries/Secretaries of the concerned

administrative departments shall take immediate measures to implement the package in association with concerned agencies wherever required. They shall draw up District-wise Departmental sub-plans and start their implementation within the available budgetary allocations. The aggregate of departmental plans for a district will be the District Plan.Requests for additional allocations must be sent immediately to Addl.Chief Secretary and Principal Secretary, Finance Dept, also pointing out possible savings under other schemes. Finance Department shall take necessary steps to release the additional allocations required for implementing this package of relief measures expeditiously. Separate details shall be kept of the expenditure incurred under this package and shall be included in the progress report.

7. Additional Chief Secretary and Development Commissioner, Govt. of Karnataka, will be the nodal officer at the State level to monitor the relief package to the farmers. He will undertake the following responsibilities.

(a) Co-ordinate with various field departments in implementation.

(b) Ensure enabling action is taken to by the Finance and other departments in Government.

(c) Monitor the impact of various measures.

(d) The Addl.Chief Secretary and Development Commissioner will submit a monthly report on the implementation of the relief package to the Cabinet.

8. The concerned administrative departments as well as Deputy Commissioners shall promptly submit progress reports for each month to the Additional Chief Secretary and Development Commissioner, Government of Karnataka by e-mail by 5th of succeeding month positively.

9. This order issues with the concurrence of FD vide their U.O.No.ACS&PS.FD/4169/2003, dated 3.9.2003.

By Order and in the name of the Governor of Karnataka,

P.R. 1171

**B.S. PATIL**

Chief Secretary, Government of Karnataka.

**ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಸಚಿವಾಲಯ**

**ವಿಷಯ:** ಕರ್ನಾಟಕ ಕೃಷಿ ಕೈಗಾರಿಕಾ ನಿಗಮ (ಕೆ.ಎ.ಐ.ಸಿ) ವನ್ನು ಮುಚ್ಚುವುದು.

**ಓದಲಾಗಿದೆ:** ಕೃಷಿ ಮತ್ತು ತೋಟಗಾರಿಕೆ ಇಲಾಖೆ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ)ಯ ಟಿಪ್ಪಣಿ

**ಪ್ರಸ್ತಾವನೆ:**

ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತವನ್ನು (ಕೆ.ಎ.ಐ.ಸಿ) ಕರ್ನಾಟಕ ರಾಜ್ಯ ಸರ್ಕಾರ ಮತ್ತು ಭಾರತ ಸರ್ಕಾರ ಇವೆರಡರ ಸಹಯೋಗದಲ್ಲಿ 1967ರಲ್ಲಿ ಸ್ಥಾಪಿಸಲಾಗಿರುತ್ತದೆ. ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಬೀಜಗಳು, ರಸಗೊಬ್ಬರಗಳು, ಕೀಟನಾಶಕಗಳು ಹಾಗೂ ಕೃಷಿ ಉತ್ಪನ್ನ ಉಪಕರಣಗಳನ್ನು ರೈತ ಸಮುದಾಯಕ್ಕೆ ಒದಗಿಸುವ ಧ್ಯೇಯಗಳೊಂದಿಗೆ ಈ ನಿಗಮವನ್ನು ಪ್ರಾರಂಭಿಸಲಾಯಿತು.

ಪ್ರಾರಂಭದಲ್ಲಿ ರಾಜ್ಯ ಸರ್ಕಾರವು 460 ಲಕ್ಷ ರೂ.ಗಳ ಷೇರು ಬಂಡವಾಳವನ್ನು ಮತ್ತು ಕೇಂದ್ರ ಸರ್ಕಾರವು 294 ಲಕ್ಷ ರೂ.ಗಳ ಷೇರು ಬಂಡವಾಳವನ್ನು ಸಂಸ್ಥೆಯಲ್ಲಿ ಹೂಡಿದ್ದವು. ನಂತರ ಕೇಂದ್ರ ಸರ್ಕಾರವು ತನ್ನ ಪಾಲಿನ ಷೇರು ಬಂಡವಾಳವಾದ 294 ಲಕ್ಷ ರೂ.ಗಳ ಷೇರುಗಳನ್ನು ರಾಜ್ಯ ಸರ್ಕಾರಕ್ಕೆ ವರ್ಗಾಯಿಸಿರುತ್ತದೆ.

ರಾಜ್ಯ ಸರ್ಕಾರವು ಇದುವರೆವಿಗೂ 80 ಕೋಟಿ ರೂ.ಗಳಷ್ಟು ಹಣವನ್ನು ಕೆ.ಎ.ಐ.ಸಿ.ಸಂಸ್ಥೆಗೆ ಒದಗಿಸಿದೆ. ಕೆ.ಎ.ಐ.ಸಿ.ಯು 1985-86 ಮತ್ತು 1986-87 ಎರಡು ವರ್ಷಗಳಲ್ಲಿ ಕನಿಷ್ಟ ಲಾಭ ತೋರಿಸಿರುವುದನ್ನು ಹೊರತುಪಡಿಸಿದರೆ ಬಾಕಿ ಉಳಿದ ಎಲ್ಲಾ ವರ್ಷಗಳಲ್ಲಿಯೂ ನಷ್ಟವನ್ನೇ ಅನುಭವಿಸುತ್ತಾ ಬಂದಿದೆ.

ಕೆ.ಎ.ಐ.ಸಿ.ಯ ವೆಚ್ಚಗಳು ಆದಾಯಕ್ಕಿಂತ ಜಾಸ್ತಿಯಾಗಿರುವುದರಿಂದ ಹಲವಾರು ವರ್ಷಗಳಿಂದ ಸಂಸ್ಥೆಯ ಕಾರ್ಯಾಚರಣೆ ಸಾಮಾನ್ಯವಾಗಿ ತೀರಾ ಕಳಪೆಯಾಗಿರುತ್ತದೆ. ಸರ್ಕಾರದ ಮತ್ತು ಬ್ಯಾಂಕುಗಳ ಸಾಲಗಳಲ್ಲದೆ ವೇತನ ಬಾಕಿ, ಶಾಸನಬದ್ಧ ವಂತಿಗೆಗಳು, ಸಾಲಗಾರರ ಬಾಕಿಗಳು, ಸಂಸ್ಥೆಯ ಇತರ ಋಣಭಾರಗಳಾಗಿ ಉಳಿದಿರುತ್ತವೆ. ಸಂಸ್ಥೆಯು ದುಬಾರಿ ಆಡಳಿತಾತ್ಮಕ ವೆಚ್ಚ ಹಾಗೂ ಸಾಲದ ಹೊರೆಯಿಂದ ಲಾಭಗಳಿಸಲು ವಿಫಲವಾಯಿತು. ಸಂಸ್ಥೆಯು 1999ರಿಂದ ಯಾವುದೇ ಲಾಭವಿಲ್ಲದೆ, ಎಲ್ಲದಕ್ಕೂ ಹಾಗೂ ತಿಂಗಳ ವೇತನ ವಿತರಿಸಲೂ ಸಹ ಕರ್ನಾಟಕ ಸರ್ಕಾರದ ಅನುದಾನದ ಮೇಲೆ ಅವಲಂಬಿಸಿ ಕಾರ್ಯನಿರ್ವಹಿಸುತ್ತಿದೆ. ಕೆ.ಎ.ಐ.ಸಿ. ಆಗಿಂದಾಗ್ಗೆ, ಹಲವಾರು ಪ್ರಸ್ತಾವನೆಗಳನ್ನು ಸರ್ಕಾರದ ಸಹಾಯ ಕೋರಿ ಸಲ್ಲಿಸಿದ್ದು, ಸರ್ಕಾರವು ವಿವಿಧ ಸಮಯಗಳಲ್ಲಿ ಗಣನೀಯ ಸಹಾಯವನ್ನು ಒದಗಿಸಿದೆ. ಇದು ಸಂಸ್ಥೆಗೆ ಹೆಚ್ಚಿಗೆ ಉಪಯುಕ್ತವಾಗಿದ್ದರೂ ಸಹ ನಗದು ಪರಿಸ್ಥಿತಿ ಮತ್ತು ವ್ಯವಹಾರದಲ್ಲಿ ಯಾವುದೇ ಸುಧಾರಣೆಯಾಗಿಲ್ಲ. ಇಷ್ಟು ನೆರವು ನೀಡಿದ್ದರೂ ಸಂಸ್ಥೆಯು ನಷ್ಟವನ್ನೇ ತೋರಿಸುತ್ತಿದೆ.

ಕರ್ನಾಟಕ ಕೃಷಿ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತವು 1967ರಲ್ಲಿ ಪ್ರಾರಂಭವಾದಾಗ ಇದ್ದ ಧ್ಯೇಯೋದ್ದೇಶಗಳನ್ನು ಸಂಸ್ಥೆಯ ಇತ್ತೀಚಿನ ಪರಿಸ್ಥಿತಿ ಮತ್ತು ಜಾಗತೀಕರಣ, ಖಾಸಗೀಕರಣ, ಮುಕ್ತ ಮಾರುಕಟ್ಟೆ, ಮತ್ತಿತರ ನೀತಿಗಳಿಂದ ಅನುಷ್ಠಾನಕ್ಕೆ ತರಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ ಗೊಬ್ಬರದ ಮೇಲೆ ಹೇರಲಾಗಿದ್ದ ನಿಯಂತ್ರಣ ಕಾಯ್ದೆಯನ್ನು ಸಹ ಈಗ ನಿರಸನಗೊಳಿಸಲಾಗಿದೆ. ಕೃಷಿ ಅಭಿವೃದ್ಧಿಗೆ ಅವಶ್ಯಕವಾದ ಉಪಕರಣಗಳನ್ನು ಸುಲಭವಾಗಿ ಆಮದುಮಾಡಿಕೊಳ್ಳುವ ಅವಕಾಶವನ್ನು ಸಹ ಈಗಿನ ಆಮದು ರಫ್ತು ನೀತಿಯಲ್ಲಿ ಒದಗಿಸಲಾಗಿರುತ್ತದೆ. ಕೆ.ಎ.ಐ.ಸಿ.ಯಲ್ಲಿರುವ ಯಂತ್ರೋಪಕರಣಗಳು ಈಗಾಗಲೇ ಬಹಳಷ್ಟು ಹಳೆಯವಾಗಿದ್ದು ಅವುಗಳ

ಉತ್ಪಾದಕತೆ ಕುಂಠಿತಗೊಂಡಿರುತ್ತದೆ. ಇದರಿಂದಾಗಿ ಕೆ.ಎ.ಐ.ಸಿ. ಒದಗಿಸುವ ಸೇವೆಗಳು ಇಂದಿನ ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕವಾಗಿಲ್ಲ.

ಸರ್ಕಾರವು ಸಾರ್ವಜನಿಕ ಉದ್ದಿಮೆ ಸುಧಾರಣೆಗಳ ಎರಡನೆಯ ಹಂತದಲ್ಲಿ ಖಾಸಗೀಕರಣಗೊಳಿಸಲು/ಮುಚ್ಚಲು 19 ಸಾರ್ವಜನಿಕ ಉದ್ದಿಮೆಗಳನ್ನು ಗುರ್ತಿಸಿದ್ದು, ಅವುಗಳಲ್ಲಿ ಕರ್ನಾಟಕ ಕೃಷಿ ಕೈಗಾರಿಕಾ ನಿಗಮ (ಕೆ.ಎ.ಐ.ಸಿ) ಕೂಡ ಸೇರಿದೆ.

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 48 ಎಸ್ಇಎಂ 2002, ಬೆಂಗಳೂರು ದಿನಾಂಕ 5-8-2002ರ ಮೇರೆಗೆ ಬಂಡವಾಳ ಹಿಂತೆಗೆತ ಮತ್ತು ರಾಜ್ಯ ಸಾರ್ವಜನಿಕ ವಲಯ ಉದ್ದಿಮೆಗಳ ಸುಧಾರಣೆಗಾಗಿ (ಡಿಡಿಪಿಇಆರ್) ಹೊಸ ಇಲಾಖೆಯನ್ನು ಸೃಜಿಸಿರುವುದರಿಂದ, ರಾಜ್ಯ ಸಾರ್ವಜನಿಕ ವಲಯ ಉದ್ದಿಮೆಗಳ ಮುಚ್ಚುವಿಕೆ, ವಿಲೀನ ಅಥವಾ ಸಾಂಸ್ಥಿಕ ಪುನರ್ ವ್ಯವಸ್ಥೆಯಂತಹ ಇತರ ಪ್ರಧಾನ ಯೋಜನೆಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಈ ಇಲಾಖೆಯೇ ನೋಡಿಕೊಳ್ಳುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 55 ಎಆರ್‌ಯು 2003, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಎ) ಕರ್ನಾಟಕ ಕೃಷಿ ಕೈಗಾರಿಕಾ ನಿಗಮವನ್ನು ಕಾನೂನಿನ ಪ್ರಕ್ರಿಯೆಗಳಿಗನುಸಾರ ತಕ್ಷಣದಿಂದ ಜಾರಿಗೆ ಬರುವಂತೆ ಮುಚ್ಚಲು ಪರವಾನಗಿ ನೀಡಿದೆ.

ಬಿ) ಎಲ್ಲಾ 656 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ನೀಡುವುದು. ಸ್ವಯಂ ನಿವೃತ್ತಿಯನ್ನು ಆಯ್ಕೆ ಮಾಡಿಕೊಳ್ಳದ ಎಲ್ಲಾ ನೌಕರರನ್ನು ಕಾನೂನಿಗನುಸಾರವಾಗಿ ವಜಾಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ವಿಶ್ವನಾಥ್**

ಪಿ.ಆರ್. 1174

ಜಂಟಿ ನಿರ್ದೇಶಕರು (ಡಬ್ಲ್ಯೂಪಿ) ಹಾಗೂ

ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಡಿಡಿಪಿಇಆರ್.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಫ್.ಜಿ. ಅರವಳ್ಳಿ, ಜಿಲ್ಲಾ ನೋಂದಣಾಧಿಕಾರಿಗಳು (ನಿವೃತ್ತ), ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ-ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 6312:98 ರಲ್ಲಿ ಆದೇಶ ಜಾರಿ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಇಎಸ್ಎಮ್ 87 (ಭಾಗ-2), ದಿನಾಂಕ:5.5.98.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ಅರ್ಜಿ ಸಂಖ್ಯೆ: 6312:1998, ದಿನಾಂಕ: 3.12.2002.

**ಪ್ರಸ್ತಾವನೆ:**

ಶ್ರೀ ಎಫ್.ಜಿ. ಅರವಳ್ಳಿ, ಈ ಹಿಂದೆ ಉಪ ನೋಂದಣಾಧಿಕಾರಿಯಾಗಿ ದಾವಣಗೆರೆ ಉಪ ನೋಂದಣಿ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಸದರಿಯವರು 123 ದಸ್ತಾವೇಜುಗಳಲ್ಲಿ ನಿಯಮಾನುಸಾರ ಮಾರುಕಟ್ಟೆ ಬೆಲೆಗನುಸಾರವಾಗಿ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಫೀ ಒಟ್ಟು 3,99,840-00 ರೂ.ಗಳ ರಾಜಸ್ವ ಹಾನಿ ಮಾಡಿದ್ದಾರೆಂಬ ಆರೋಪವು ಇಲಾಖಾ ವಿಚಾರಣಾ ವರದಿಯಿಂದ ಸಾಬೀತಾಗಿದ್ದರಿಂದ ಮೇಲೆ ಓದಲಾದ (1)ರ ದಿನಾಂಕ: 5.5.98ರ ಆದೇಶದಲ್ಲಿ ಆಪಾದಿತ ಅಧಿಕಾರಿಯಿಂದ 3,99,840-00 ರೂ.ಗಳ ವಸೂಲಾತಿ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1975ರ ನಿಯಮ 8 (III) ರ ಪ್ರಕಾರ ಶ್ರೀ ಎಫ್.ಜಿ. ಅರವಳ್ಳಿಯವರ ಮುಂದಿನ ಮೂರು ವರ್ಷಗಳ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ ತಡೆಹಿಡಿಯುವ ಆದೇಶ ಮಾಡಲಾಗಿತ್ತು.

ಸದರಿ ಆದೇಶದ ವಿರುದ್ಧ ಶ್ರೀ ಎಫ್.ಜಿ. ಅರವಳ್ಳಿ ಅವರು ಮೇಲೆ ಓದಲಾದ (2) ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 6312:98 ರಲ್ಲಿ ದಿನಾಂಕ:3.12.2002 ರಂದು ನೀಡಿದ ಆದೇಶದ ಪ್ಯಾರಾ 3 ರಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

In the circumstances, it is clear that the order of the disciplinary authority imposing punishment as aforesaid, if based on no evidence and has to be quashed. In the circumstances Annexure-A9 bearing No. RD 25 ESM 87 (Part-II) dated: 5.5.1998 stands quashed. The applicant shall be entitled to all the consequential benefits on the quashing of Annexure A9.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 3.12.2002 ರಂದು ನೀಡಿದ ಆದೇಶದ ಮೇಲೆ ಮೇಲ್ಮನವಿ ಸಲ್ಲಿಸಲು ಸರ್ಕಾರಿ ವಕೀಲರ ಮತ್ತು ಕಂದಾಯ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರ ಅಭಿಪ್ರಾಯ ನೀಡುತ್ತಾ ಈ ಪ್ರಕರಣವು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಹೇಳಿದ್ದರಿಂದ ಸರ್ಕಾರವು ಆದೇಶದ ವಿರುದ್ಧ ಮೇಲ್ಮನವಿಯನ್ನು ಕೈಬಿಟ್ಟು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೋಸೇ(2) 2003, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಫ್.ಜಿ. ಅರವಳ್ಳಿ, ಹಿಂದಿನ ಉಪ ನೋಂದಣಾಧಿಕಾರಿ, ದಾವಣಗೆರೆ ಉಪ ನೋಂದಣಿ ಕಛೇರಿ, ಹಾಲಿ ನಿವೃತ್ತ ಸಹಾಯಕ ನೋಂದಣಿ ಮಹಾಪರಿವೀಕ್ಷಕರು, ಬೆಂಗಳೂರು ಇವರ ವಿರುದ್ಧ ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಇಎಸ್ಎಂ 87 (ಭಾಗ-II), ದಿನಾಂಕ: 5.5.98 ರಂದು ಹೊರಡಿಸಿದ ಆದೇಶದಲ್ಲಿ ಸದರಿ ಅಧಿಕಾರಿಗಳಿಂದ ರೂ.3,99,840-00 ಗಳ ವಸೂಲಾತಿ ಹಾಗೂ ಮುಂದಿನ 3 ವರ್ಷಗಳ ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ಆದೇಶವನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 6312:98, ದಿನಾಂಕ: 3.12.2002 ರಲ್ಲಿ ರದ್ದುಗೊಳಿಸಿರುವುದರಿಂದ ಸದರಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ. ಈ ಅಧಿಕಾರಿಯವರ ವಿರುದ್ಧ ದಿನಾಂಕ:

05-05-1998 ರಂದು ಹೊರಡಿಸಿದ ಆದೇಶವನ್ನು ಹೊರಡಿಸದೇ ಇದ್ದರೆ ಅವರಿಗೆ ಸಿಗುತ್ತಿದ್ದ ಎಲ್ಲಾ ಸೌಲಭ್ಯಗಳಿಗೆ ಹಕ್ಕುದಾರರಾಗಿರುತ್ತಾರೆ ಎಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1175 **ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಕೆ.ಪಿ. ಸಿದ್ದಪ್ಪ ಗ್ರೂಪ್ ಎ ಅಧಿಕಾರಿ (ನಿವೃತ್ತ)ರವರು ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ:ಸಿಬ್ಬಂದಿ/(3)/ಸಿಆರ್/13/2000-2001 ದಿನಾಂಕ:17/09/2002.
2. ತಿಳುವಳಿಕೆ ಪತ್ರ ಸಂಖ್ಯೆ: ಕಂಇ 224 ಮುಸೇವಿ 2000, ದಿನಾಂಕ:21/09/2002.
3. ಶ್ರೀ ಕೆ.ಪಿ. ಸಿದ್ದಪ್ಪ (ಗ್ರೂಪ್ ಎ) ಅಧಿಕಾರಿ (ನಿವೃತ್ತ) ರವರ ದಿ:19/10/2002ರ ಮನವಿ ಪತ್ರ.

**ಪ್ರಸ್ತಾವನೆ:**

ಶ್ರೀ ಕೆ.ಪಿ. ಸಿದ್ದಪ್ಪ, ಗ್ರೂಪ್ ಎ ಅಧಿಕಾರಿ (ನಿವೃತ್ತ)ರವರು ಈ ಹಿಂದೆ ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆಪಾದನೆಗಳಿಗೆ ಗುರಿಯಾಗಿದ್ದರು.

(1) ದೇವಾಲಯದ ಉಪಯೋಗಕ್ಕೆಂದು ಹೆವಿ ಡ್ಯೂಟಿ ಆಂಪ್ಲಿಫ್ಲೇಯರ್, ಮೈಕ್ ಸೆಟ್, ಸ್ಪೀಕರ್ಸ್, ಹಾರನ್ಸ್‌ಗಳನ್ನು ಮೈಸೂರಿನ ಮೆ: ಅಹುಜಾ ಕಂಪನಿಯವರಿಂದ ರೂ.2,77,792-00ರ ವೆಚ್ಚದಲ್ಲಿ ಸಕ್ಷಮ ಪ್ರಾಧಿಕಾರದ ಮಂಜೂರಾತಿ ಪಡೆಯದೇ ಖರೀದಿಸಿರುವುದು.

(2) ದೇವಾಲಯದ ಉಪಯೋಗಕ್ಕೆಂದು ಹೆವಿ ಡ್ಯೂಟಿ ಆಂಪ್ಲಿಫ್ಲೇಯರ್, ಮೈಕ್ ಸೆಟ್, ಸ್ಪೀಕರ್ಸ್, ಹಾರನ್ಸ್‌ಗಳನ್ನು ಮೈಸೂರಿನ ಮೆ: ಅಹುಜಾ ಕಂಪನಿಯವರಿಂದ ಖರೀದಿಸುವ ಸಲುವಾಗಿ ಈ ಸಂಸ್ಥೆಯವರಿಗೆ ರೂ.1.00 ಲಕ್ಷಗಳನ್ನು ಮುಂಗಡವಾಗಿ ರಶೀತಿ ನಂ.040 ದಿನಾಂಕ:20.03.2000ರಲ್ಲಿ ಪಾವತಿಸಿ 1958ರ ಕರ್ನಾಟಕ ಆರ್ಥಿಕ ಸಂಹಿತೆಗೆ ವಿರುದ್ಧವಾಗಿ ಕ್ರಮ ಜರುಗಿಸಿರುವುದು.

(3) ದೇವಾಲಯದ ಉಪಯೋಗಕ್ಕೆಂದು ಹೆವಿ ಡ್ಯೂಟಿ ಆಂಪ್ಲಿಫ್ಲೇಯರ್, ಮೈಕ್ ಸೆಟ್ ಹಾಗೂ ಇದಕ್ಕೆ ಸಂಬಂಧಪಟ್ಟ ಉಪಕರಣಗಳನ್ನು ಖರೀದಿಸುವಾಗ ನಿಯಮಾನುಸಾರ ದರಪಟ್ಟಿಗಳನ್ನು ಆಹ್ವಾನಿಸುವ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸದೇ ಒಂದೇ ಸಂಸ್ಥೆಯವರಿಂದ 3 ದರಪಟ್ಟಿಗಳನ್ನು ಬೇರೆ ಬೇರೆ ಸಂಸ್ಥೆಯ ಹೆಸರಿನಿಂದ ಪಡೆದು ಸಲ್ಲಿಸಿರುವುದು.

(4) ದೇವಾಲಯದ ಉಪಯೋಗಕ್ಕೆಂದು ರೂ.2,77,792-00 ಮೌಲ್ಯದ ಹೆವಿ ಡ್ಯೂಟಿ ಆಂಪ್ಲಿಫ್ಲೇಯರ್ ಸೆಟ್‌ನ್ನು ಖರೀದಿಸಲು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ದಿನಾಂಕ:13.03.2000 ರಂದು ಮೈಸೂರಿನ ಮೆ: ಅಹುಜಾ ಕಂಪನಿಯವರಿಗೆ ಉಪಕರಣಗಳ ಸರಬರಾಜು ಆದೇಶವನ್ನು ನೀಡಿರುವುದು.

(5) ದೇವಾಲಯದ ಉಪಯೋಗಕ್ಕೆಂದು ಹೆವಿ ಡ್ಯೂಟಿ ಮೈಕ್ ಸೆಟ್‌ಗಳನ್ನು ಖರೀದಿಸುವ ಸಲುವಾಗಿ ಮೆ: ಅಹುಜಾ ಕಂಪನಿ, ಮೈಸೂರು ಅವರಿಗೆ ಸಕ್ಷಮ ಪ್ರಾಧಿಕಾರದ ಮಂಜೂರಾತಿ ಪಡೆಯದೇ ರೂ.1.00 ಲಕ್ಷದ ಹಣವನ್ನು ದೇವಾಲಯದ ನಿಧಿಯಿಂದ ಭರಿಸಿ ಮುಂಗಡವಾಗಿ ಪಾವತಿಸಿದ್ದು, ಇದರಿಂದ ರೂ.1.00 ಲಕ್ಷಕ್ಕೆ ದಿನಾಂಕ:20.03.2000 ರಿಂದ 19.09.2000ದ ಅವಧಿಗೆ ಶೇ:6ರ ಸರಳ ಬಡ್ಡಿಯಂತೆ ಲೆಕ್ಕಾಚಾರ ಮಾಡಿದಾಗ ದೇವಾಲಯಕ್ಕೆ ಬರುತ್ತಿದ್ದು ಸುಮಾರು ರೂ.3000.00ಗಳ ಆದಾಯವನ್ನು ತಪ್ಪಿಸಿ ನಷ್ಟ ಉಂಟು ಮಾಡಿರುವುದು.

(6) ದೇವಾಲಯದ ಉಪಯೋಗಕ್ಕೆಂದು ಖರೀದಿಸಿದ ಹೆವಿ ಡ್ಯೂಟಿ ಮೈಕ್ ಸೆಟ್ ಉಪಕರಣಗಳನ್ನು ಸಕ್ಷಮ ಪ್ರಾಧಿಕಾರದ ಮಂಜೂರಾತಿ ಇಲ್ಲದೇ ಖರೀದಿಸಿದ ಬಗ್ಗೆ ಜಿಲ್ಲಾಧಿಕಾರಿಗಳ ಕಛೇರಿಯಿಂದ ಸಂ.ಡಿವಿಎಸ್/5/ಎಸ್‌ಎಸ್‌ಟಿ/ಸಿಆರ್/96/ 99-2000 ದಿನಾಂಕ:11.08.2000 ರಂದು ಕಾರಣ ಕೇಳಿ ನೋಟೀಸ್ ನೀಡಿದ್ದು, ನೀವು ಇನ್ನು ಮುಂದೆ ಈ ರೀತಿಯ ತಪ್ಪನ್ನು ಮಾಡುವುದಿಲ್ಲವೆಂದು ಒಪ್ಪಿಕೊಂಡಿರುವುದು.

ಮೇಲೆ ಕ್ರಮ ಸಂಖ್ಯೆ:(1)ರಲ್ಲಿನ ದಿನಾಂಕ:17.09.2002ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಶ್ರೀ ಕೆ.ಪಿ. ಸಿದ್ದಪ್ಪ ರವರ ಮೇಲಿನ ಆರೋಪಗಳ ಬಗ್ಗೆ ಆರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಮೇಲೆ ಕ್ರಮ ಸಂಖ್ಯೆ: (2)ರಂತೆ ದಿನಾಂಕ:21.09.2002ರಲ್ಲಿ ಸರ್ಕಾರವು ಈ ಆರೋಪಣಾ ಪಟ್ಟಿಯನ್ನು ಶ್ರೀ ಕೆ.ಪಿ. ಸಿದ್ದಪ್ಪ ರವರಿಗೆ ಕಳುಹಿಸಿ 15 ದಿನಗಳೊಳಗಾಗಿ ಅವರ ಸಮಜಾಯಿಷಿ ಹೇಳಿಕೆಯನ್ನು ಕೇಳಲಾಗಿತ್ತು. ಮೇಲೆ ಕ್ರಮ ಸಂಖ್ಯೆ:(3)ರ ದಿನಾಂಕ:19.10.2002ರ ಮನವಿ ಪತ್ರದಲ್ಲಿ ತಮ್ಮ ಪ್ರತಿವಾದದ ಹೇಳಿಕೆಯನ್ನು ಸಲ್ಲಿಸಲು ಒಂದು ತಿಂಗಳ ಕಾಲಾವಕಾಶವನ್ನು ಕೋರಿದಂತೆ ದಿನಾಂಕ:19.10.2002ರಿಂದ ಒಂದು ತಿಂಗಳ ಕಾಲಾವಕಾಶವನ್ನು ಸರ್ಕಾರದ ಪತ್ರ ಸಂಖ್ಯೆ:ಕಂಇ 244 ಮುಸೇವಿ 2000 ದಿನಾಂಕ:13.11.2002ರ ಪತ್ರದಲ್ಲಿ ನೀಡಲಾಗಿದೆ. ಅಲ್ಲದೇ, ಸದರಿಯವರಿಗೆ ದಾಖಲಾತಿಗಳನ್ನು ಪರಿಶೀಲಿಸಲು ಅವಕಾಶ ಮಾಡಿಕೊಡಲಾಗಿದೆ. ಸಾಕಷ್ಟು ಸಮಯಾವಕಾಶ ನೀಡಿದ್ದರೂ ಶ್ರೀ ಕೆ.ಪಿ. ಸಿದ್ದಪ್ಪರವರು ತಮ್ಮ ಲಿಖಿತ ಸಮಜಾಯಿಷಿ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಶ್ರೀ ಕೆ.ಪಿ. ಸಿದ್ದಪ್ಪರವರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಈ ಆರೋಪಿತ ಅಧಿಕಾರಿಯ ವಿರುದ್ಧ ಇಲಾಖೆ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 244 ಮುಸೇವಿ 2000, ಬೆಂಗಳೂರು, (ಆರ್‌ಡಿ/70/ಪಸ್ವೀರ/2003)**

**ದಿನಾಂಕ: 9ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಕೆ.ಪಿ. ಸಿದ್ದಪ್ಪ, ಗ್ರೂಪ್ 'ಎ' ಅಧಿಕಾರಿ (ನಿವೃತ್ತ) ಹಾಗೂ ಅಂದಿನ

ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ ರವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರಾದ ಶ್ರೀ ಜಿ.ಇಂಧುದರ ನಂ.8, 15ನೇ ಕ್ರಾಸ್, ನೂರು ಅಡಿ ರಿಂಗ್ ರಸ್ತೆ, 5ನೇ ಫೇಸ್, ಜೆ.ಪಿ.ನಗರ, ಬೆಂಗಳೂರು 560 078 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 (5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಕಛೇರಿಯ ಕಛೇರಿ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಕೆಸಿಎಸ್ (ಸಿಸಿಎ) ನಿಯಮ 1957ರ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 3 (ಮೂರು) ತಿಂಗಳೊಳಗಾಗಿ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1176

**ಸಿ. ಸರೋಜ**

ಸರ್ಕಾರದ ಅಧೀನ ಕಾರ್ಯದರ್ಶಿ ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಉಪ ನೋಂದಣಿ ಕಛೇರಿ, ಟಿ. ನರಸೀಪುರ ಇಲ್ಲಿ ನಡೆಯಲಾದ ಟ್ರಾಪ್ ಪ್ರಕರಣದ ಬಗ್ಗೆ ಪ್ರಕರಣವನ್ನು ಲೋಕಾಯುಕ್ತ ಅವರಿಂದ ಇಲಾಖಾ ವಿಚಾರಣೆ ನಡೆಸುವ ಕುರಿತು.

**ಓದಲಾಗಿದೆ:** ನಿಬಂಧಕರು, ಲೋಕಾಯುಕ್ತ ಕಛೇರಿ, ಬೆಂಗಳೂರು ಅವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಕಂಪ್ಲೇಟ್:ಉಪ ಲೋಕಾಯುಕ್ತ:ಎಂವೈಎಸ್-9:2001-02; ಪಿಪಿ, ದಿನಾಂಕ:9-4-2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:9-4-2003ರ ಅರೆ ಸರ್ಕಾರಿ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಅವರ ತಮ್ಮ ಪತ್ರದೊಂದಿಗೆ ಮಾನ್ಯ ಲೋಕಾಯುಕ್ತರವರು ಲೋಕಾಯುಕ್ತರ ತನಿಖಾಧಿಕಾರಿಗಳ ವರದಿಯ ಮೇಲೆ ತಮ್ಮ ಅಭಿಪ್ರಾಯದ ವರದಿಯಲ್ಲಿ ಕರ್ನಾಟಕ ಲೋಕಾಯುಕ್ತದ ಕಾಯ್ದೆ ಪ್ರಕಾರ 12(4) ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸುವಂತೆ ಶಿಫಾರಸ್ಸು ಮಾಡಿದ್ದಾರೆ. ಅದರಂತೆ ಪ್ರಕರಣವನ್ನು 12(4) ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಪ್ರಕರಣದ ಸಂಕ್ಷಿಪ್ತ ವಿವರಣೆ:-**

ಶ್ರೀ ವಿ. ರಾಜಗೋಪಾಲಯ್ಯ, ಹಿರಿಯ ಉಪ ನೋಂದಣಾಧಿಕಾರಿ ಅವರು ಟಿ. ನರಸೀಪುರ ಉಪ ನೋಂದಣಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೊಮ್ಮನಹಳ್ಳಿ ಗ್ರಾಮದ ಸರ್ವೆ ನಂ. 105 ರಲ್ಲಿಯ 1 ಎಕರೆ 1 ಗುಂಟೆ ಜಮೀನನ್ನು ನೋಂದಣಿ ಮಾಡಲು 2,000-00 ಗಳನ್ನು ಶ್ರೀ ಜಿ. ಕೃಷ್ಣಸ್ವಾಮಿ, ಟಿ. ನರಸೀಪುರ ಅವರಿಂದ ಪಡೆಯಲು ಬೇಡಿಕೆ ಸಲ್ಲಿಸಿದಂತೆ, ಶ್ರೀ ಜಿ. ಕೃಷ್ಣಸ್ವಾಮಿ ರೂ.2,000-00ಗಳನ್ನು ನೀಡಲು ಹೋದಾಗ ಸದರಿ 2,000-00 ಗಳನ್ನು ಅಲ್ಲಿಯೇ ಇದ್ದ ಬರಹಗಾರ ಶ್ರೀಯುತ ಹೆಚ್. ಅನಂತಗೌಡ ಅವರಲ್ಲಿ ಕೊಡಲು ತಿಳಿಸಿದಂತೆ ನೀಡುತ್ತಿರುವಾಗ ಲೋಕಾಯುಕ್ತ ಅಧಿಕಾರಿಗಳ ಟ್ರಾಪ್ ಬಲೆಗೆ ಸಿಕ್ಕಿಹಾಕಿಕೊಂಡಿದ್ದಾರೆ. ಈ ಕುರಿತು ಆರೋಪಿತ ಶ್ರೀ ವಿ. ರಾಜಗೋಪಾಲಯ್ಯ, ಹಿರಿಯ ಉಪ ನೋಂದಣಾಧಿಕಾರಿ ಮತ್ತು ಪತ್ರ ಬರಹಗಾರ ಶ್ರೀ ಹೆಚ್. ಅನಂತಗೌಡ ಯಾವುದೇ ರಕ್ಷಣಾತ್ಮಕ ಹೇಳಿಕೆ ನೀಡಿರುವುದಿಲ್ಲ. ಪಿರ್ಯಾಧಿ ಪಂಚ ಸಾಕ್ಷಿದಾರರು ಸಿಬ್ಬಂದಿ ವರ್ಗದವರು ಸ್ವತಂತ್ರ ಸಾಕ್ಷಿದಾರರು ನೀಡಿರುವ ಹೇಳಿಕೆಗಳು ವಸ್ತುನಿಷ್ಟ ಸಾಕ್ಷ್ಯಾಧಾರಗಳು ರಸಾಯನಿಕ ಪರಿವೀಕ್ಷಕರ ವಿಶ್ಲೇಷಣಾ ವರದಿ ಆರೋಪಿತ ಸರ್ಕಾರಿ ಅಧಿಕಾರಿಯಾದಲ್ಲಿ ಪಿರ್ಯಾಧಿಯವರ ಅಧಿಕೃತ ಕೆಲಸ ಟ್ರಾಪ್ ಸಮಯದಲ್ಲಿ ವಿಲೇ ಆಗದೇ ಇದ್ದು ಲಂಚದ ಹಣಕ್ಕೆ ಒತ್ತಾಯ ಇತ್ತು ಎನ್ನುವುದು ಕಂಡು ಬರುತ್ತದೆ.

ತನಿಖೆ ಸಮಯದಲ್ಲಿ ಸಂಗ್ರಹಿಸಿದ ಸಾಕ್ಷಿ ಪುರಾವೆಗಳ ಆಧಾರದ ಮೇಲೆ ಆರೋಪಿತ ನೌಕರರಾದ ಶ್ರೀ ವಿ. ರಾಜಗೋಪಾಲಯ್ಯ, ಹಿರಿಯ ಉಪ ನೋಂದಣಾಧಿಕಾರಿ ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಕಾಯ್ದೆ ನಿಯಮ 12(4)ರಡಿಯಲ್ಲಿ ಸಲ್ಲಿಸಿರುವ ಪ್ರಕರಣದ ಮೇಲೆ ಕ್ರಮ ಜರುಗಿಸುವ ಕುರಿತು ಮಾನ್ಯ ಲೋಕಾಯುಕ್ತರವರ ದಿನಾಂಕ: 29-3-2003ರ ವರದಿಯನ್ನು ಪರಿಶೀಲಿಸಿ ಸತ್ಯಾಸತ್ಯತೆಯನ್ನು ಕಂಡು ಹಿಡಿಯುವ ಕುರಿತು ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 23 ಮುನೋಸೇ (2) 2003, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ವಿ. ರಾಜಗೋಪಾಲಯ್ಯ, ಹಿರಿಯ ಉಪನೋಂದಣಾಧಿಕಾರಿ, ಟಿ. ನರಸೀಪುರ, ಉಪನೋಂದಣಿ ಕಛೇರಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14-ಎರಂತೆ ನಿಯಮ 11ರೊಂದಿಗೆ ನಿಹಿತವಾಗಿರುವಂತೆ ಇರುವ ಅಧಿಕಾರದನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸಲಾಗಿದೆ. ವಿಚಾರಣೆಯನ್ನು ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1177

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ ಈ ಸಂಘಕ್ಕೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಹಾಗೂ ಸಲಹಾ ಸಮಿತಿ ರಚಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೊಸೊ 2000, ದಿನಾಂಕ: 16-6-2001.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16-6-2001ರ ಸರ್ಕಾರಿ ಆದೇಶದಲ್ಲಿ ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಿಸಲಾಗಿತ್ತು. ಕಾಲಕಾಲಕ್ಕೆ ಆಡಳಿತಾಧಿಕಾರಿ ವಿಸ್ತರಿಸಲಾಗಿದೆ. ಸಂಸ್ಥೆಯ ಕುರಿತು ಪ್ರಕರಣವು ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿರುವುದರಿಂದ ಸಂಸ್ಥೆಗೆ ಚುನಾವಣೆ ನಡೆಸುವುದು ಸಾಧ್ಯವಾಗಿಲ್ಲ. ಆದ್ದರಿಂದ ಆಡಳಿತಾಧಿಕಾರಿಯವರಿಗೆ 5 ಸದಸ್ಯರ ಸಲಹಾ ಸಮಿತಿಯನ್ನು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೊಸೊ 2000, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:16-6-2003 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಕೆಳಗೆ ನಮೂದಿಸಿದ 5 ಸದಸ್ಯರ ಸಲಹಾ ಸಮಿತಿಯನ್ನು ನೇಮಕ ಮಾಡಿ ಆದೇಶಿಸಿದೆ. ಈ ಅಧಿಕಾರೇತರ ಸದಸ್ಯರುಗಳ ಅವಧಿಯು ಆಡಳಿತಾಧಿಕಾರಿಯವರ ಅಧಿಕಾರದ ಅವಧಿಯವರೆಗೆ ಅಥವಾ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

1) ಶ್ರೀ ಆದಿಶೇಷ ಕುಮಾರ್ ಬಿನ್ ಲೇಟ್ ಅಂಕರ ಶೆಟ್ಟಿ, ಚನ್ನರಾಯಪಟ್ಟಣ.
2) ಶ್ರೀ ಶೇಷಾಚಲ ಚನ್ನರಾಯಪಟ್ಟಣ.
3) ಶ್ರೀ ಮುರಳಿ ಬಿನ್ ಅನೇಕೆರೆ ಕೃಷ್ಣಮೂರ್ತಿ, ಚನ್ನರಾಯಪಟ್ಟಣ.
4) ಶ್ರೀ ಸತೀಶ್ ಬಿನ್ ಲೇಟ್ ಗರಗಣ್ಣ, ಚನ್ನರಾಯಪಟ್ಟಣ.
5) ಶ್ರೀ ಪುಟ್ಟಸ್ವಾಮಿ ಬಿನ್ ಕಡ್ಲೇಕಾಯಿ ನಂಜಪ್ಪ, ಮಾಜಿ ಪುರಸಭಾ ಸದಸ್ಯರು ಚನ್ನರಾಯ ಪಟ್ಟಣ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1178

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಕಂದಾಯ ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್‌ಆರ್ 2002, ದಿನಾಂಕ: 3.1.2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 3.1.2003ರ ಸರ್ಕಾರಿ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿ ಕಂದಾಯ ಇಲಾಖೆಯ ಅಧೀನದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರಪರಿಸ್ಥಿತಿಯ ಉಸ್ತುವಾರಿಗಾಗಿ ಬರ ಉಸ್ತುವಾರಿ ಕೋಶವನ್ನು ದಿನಾಂಕ: 1.12.2002 ರಿಂದ 30.6.2003 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ಸೃಜಿಸಲಾಗಿತ್ತು. ರಾಜ್ಯದಲ್ಲಿ ಪ್ರಸ್ತುತ ಇರುವ ಬರಪರಿಸ್ಥಿತಿ ಹಾಗೂ ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳ ನಿರ್ವಹಣೆಗಾಗಿ ಮಂಜೂರಾದ ಈ ಬರ ಉಸ್ತುವಾರಿ ಕೋಶದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ಬೆಂಗಳೂರು, ದಿನಾಂಕ: 24ನೇ ಜೂನ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ 4 ಹುದ್ದೆಗಳ ಪೈಕಿ ಕೇವಲ ಒಂದು ಹುದ್ದೆಯನ್ನು ಮಾತ್ರ (ಸದರಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಮಾಜ್ ಅಹಮ್ಮದ್ ಷರೀಫ್ ವಿಶೇಷಾಧಿಕಾರಿ ಇವರ ಹುದ್ದೆ) ಪೂರಕ ಸಿಬ್ಬಂದಿ ಸಹಿತ ದಿನಾಂಕ 1.7.2003 ರಿಂದ 31.12.2003 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ. ಎಫ್ ಡಿ 1 ಟಿಎಫ್‌ಪಿ 96 ದಿನಾಂಕ 10.7.96 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1179

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಅಭಾವ ಪರಿಹಾರ)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** 2003-04ನೇ ಖಾರೀಫ್ ಋತುವಿನಲ್ಲಿ ಭಾರತ ಸರ್ಕಾರವು ನಿಗದಿಪಡಿಸಿರುವ ಕನಿಷ್ಟ ಬೆಂಬಲ ಬೆಲೆಯಲ್ಲಿ ರೈತರು ಬೆಳೆದ ಬೆಳೆಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:**

1. ಭಾರತ ಸರ್ಕಾರದ ಕೃಷಿ ಸಚಿವಾಲಯದ ಪತ್ರ ಸಂಖ್ಯೆ: O.M.No:6-1/2003-FES-ES(v.II), ದಿನಾಂಕ 31.7.2003 ಮತ್ತು ಭಾರತ ಸರ್ಕಾರದ ಗ್ರಾಹಕರ ವ್ಯವಹಾರಗಳು ಮತ್ತು ಸಾರ್ವಜನಿಕ ವಿತರಣಾ ಸಚಿವಾಲಯದ ಪತ್ರ ಸಂಖ್ಯೆ: 160(3)/2003.PY.I, ದಿ:1.8.2003.
2. ಸರ್ಕಾರದ ಆದೇಶ ಸಂಖ್ಯೆ:ಆನಾಸ 24 ಆರ್‌ಪಿಆರ್ 98(ಭಾ-II) ದಿನಾಂಕ: 3.11.98.

**ಪ್ರಸ್ತಾವನೆ:**

ಭಾರತ ಸರ್ಕಾರವು ಉಲ್ಲೇಖಿತ ದಿ: 31.7.2003 ಮತ್ತು ದಿ:1.8.2003ರ ಪತ್ರಗಳಲ್ಲಿ 2003-04ನೇ ಖಾರೀಫ್ ಋತುವಿನಲ್ಲಿ ಭತ್ತ, ಒರಟು ಧಾನ್ಯಗಳು ಮತ್ತು ಇತರೇ ಮುಂಗಾರು ಬೆಳೆಗಳಿಗೆ ಕನಿಷ್ಟ ಬೆಂಬಲ ಬೆಲೆಯನ್ನು ನಿಗದಿಪಡಿಸಿದೆ.

ರಾಜ್ಯ ಸರ್ಕಾರವು ಉಲ್ಲೇಖಿತ (2)ರಲ್ಲಿನ ಸರ್ಕಾರದ ಆದೇಶದಲ್ಲಿ ಆಹಾರಧಾನ್ಯಗಳನ್ನು ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲು ರಾಜ್ಯ ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಟಾಸ್ಕ್ ಫೋರ್ಸ್ ಕಮಿಟಿಗಳನ್ನು ನೇಮಿಸಿದೆ ಹಾಗೂ ಅವು ಅಸ್ತಿತ್ವದಲ್ಲಿವೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 50 ಆರ್‌ಪಿಆರ್ 2003, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2003**

ಮೇಲೆ ತಿಳಿಸಿದ ಕಾರಣಗಳಿಂದ ಬೆಂಬಲ ಬೆಲೆ ಯೋಜನೆಯಡಿ ಭಾರತ ಸರ್ಕಾರವು ನಿಗದಿಪಡಿಸಿದ ಈ ಕೆಳಕಂಡ ಆಹಾರಧಾನ್ಯಗಳ ಬೆಲೆಯು ಮಾರುಕಟ್ಟೆಯಲ್ಲಿ ಆಯಾ ಬೆಳೆಗಳ ಮುಂದೆ ತೋರಿಸಿದ ಬೆಂಬಲ ಬೆಲೆಗಿಂತ ಕಡಿಮೆಯಾದಲ್ಲಿ, ಈ ಆದೇಶದಲ್ಲಿ ನಿಗದಿಪಡಿಸಿರುವ ನೋಡಲ್ ಏಜೆನ್ಸಿಗಳು ಸಬ್ ಏಜೆನ್ಸಿಗಳ ಮೂಲಕ ಖರೀದಿಸತಕ್ಕದ್ದು.

| ಕ್ರ. ಸಂ. | ಬೆಳೆಗಳು | ವೆರೈಟಿ | ಕನಿಷ್ಟ ಬೆಂಬಲ ಬೆಲೆ (ರೂ. ಪ್ರತಿ ಕ್ವಿಂಟಾಲಿಗೆ) |
|---|---|---|---|
| 1. | ಭತ್ತ | ಸಾಮಾನ್ಯ | 550 |
| | ಭತ್ತ | ಗ್ರೇಡ್ - ಎ | 580 |
| 2. | ಜೋವರ್ (ಜೋಳ) | - | 505 |
| 3. | ಬಾಜ್ರ (ಸಜ್ಜೆ) | - | 505 |
| 4. | ಮೈಜ್ (ಮೆಕ್ಕೆಜೋಳ) | - | 505 |
| 5. | ರಾಗಿ | - | 505 |
| 6. | ತುರ್ (ಅರ್‌ಹಾರ್) (ತೊಗರಿ) | - | 1360 |
| 7. | ಮೂಂಗ್ (ಹೆಸರು) | - | 1370 |
| 8. | ಉರ್ದ್ (ಉದ್ದು) | - | 1370 |
| 9. | ಕಡಲೆಕಾಯಿ | - | 1400 |
| 10. | ಸೋಯಾಬಿನ್<br>ಸೋಯಾಬಿನ್ | ಹಳದಿ<br>ಕಪ್ಪು | 930<br>840 |
| 11. | ಸೂರ್ಯಕಾಂತಿ ಬೀಜ | - | 1250 |
| 12. | ಸೆಸಮಮ್ (ಎಳ್ಳು) | - | 1485 |
| 13. | ನೈಗರ್ ಸೀಡ್ (ಗುರೆಳ್ಳು) | - | 1155 |
| 14. | ರಾ ಕಾಟನ್ (ಹತ್ತಿ) | F-414/J-34/H-777 | 1725 |
| | ರಾ ಕಾಟನ್ (ಹತ್ತಿ) | H-4 | 1925 |

2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಸಿಎಸ್ 24 ಆರ್‌ಪಿಆರ್ 98(ಭಾಗ-II) ದಿ:3.11.98ರಲ್ಲಿ ನೇಮಿಸಲಾಗಿರುವ ರಾಜ್ಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಟಾಸ್ಕ್‌ಫೋರ್ಸ್ ಕಮಿಟಿಗಳನ್ನು 2003-04ನೇ ಖಾರೀಫ್ ಮಾರುಕಟ್ಟೆ ಋತುವಿಗೂ ಸಹ ಮುಂದುವರಿಸಲಾಗಿದ್ದು, ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯ ಕಾರ್ಯವನ್ನು ಹಮ್ಮಿಕೊಳ್ಳುವಂತೆ ಆದೇಶಿಸಿದೆ.

3. ಮೇಲೆ ತಿಳಿಸಿರುವ ಬೆಳೆಗಳ ಬೆಲೆಯ ಕನಿಷ್ಟ ಬೆಂಬಲ ಬೆಲೆಗಿಂತ ಕಡಿಮೆಯಾದಲ್ಲಿ, ಮಾರುಕಟ್ಟೆ ಮಧ್ಯೆ ಪ್ರವೇಶಿಸಿ, ಸದರಿ ಬೆಳೆಗಳನ್ನು ರೈತರಿಂದ ಖರೀದಿಸಲು ಕೆಳಕಂಡ ಸಂಸ್ಥೆಗಳು/ನಿಗಮ/ಮಹಾಮಂಡಳಿಯನ್ನು ಸಬ್ ಏಜೆನ್ಸಿ/ನೋಡಲ್ ಏಜೆನ್ಸಿಯಾಗಿ ನೇಮಿಸಲಾಗಿದೆ.

| ಕ್ರ. ಸಂ. | ಬೆಳೆಗಳ ವಿವರ | ನೋಡಲ್ ಏಜೆನ್ಸಿ | ಸಬ್ ಏಜೆನ್ಸಿ |
|---|---|---|---|
| 1. | (ಅ) ಭತ್ತ-ಸಾಮಾನ್ಯ<br>(ಆ) ಭತ್ತ-ಗ್ರೇಡ್-ಎ<br>**ಒರಟು ಧಾನ್ಯಗಳು**<br>ಜೋಳ, ಸಜ್ಜೆ, ರಾಗಿ, ಮೈಜ್ (ಮೆಕ್ಕೆಜೋಳ, ಗೋವಿನ ಜೋಳ) | ಭಾರತ ಆಹಾರ ನಿಗಮ | 1) ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು |
| 2. | **ದ್ವಿದಳಧಾನ್ಯಗಳು**<br>ತೊಗರಿ (ಅರ್‌ಹರ್) (ತುರ್) ಹೆಸರು (ಉದ್ದು) | ರಾಷ್ಟ್ರೀಯ ಕೃಷಿ ಸಹಕಾರ ಮಾರುಕಟ್ಟೆ ಮಹಾ ಮಂಡಳಿ, ಬೆಂ. (NAFED) | ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ (MARKFED) |

| ಕ್ರ. ಸಂ. | ಬೆಳೆಗಳ ವಿವರ | ನೋಡಲ್ ಏಜೆನ್ಸಿ | ಸಬ್ ಏಜೆನ್ಸಿ |
|---|---|---|---|
| 3. | **ಎಣ್ಣೆಬೀಜಗಳು:**<br>ಕಡ್ಲೆಕಾಯಿ (ಸಿಪ್ಪೆಯೊಂದಿಗೆ)<br>ಸೋಯಾಬಿನ್ (ಕಪ್ಪು)<br>ಸೋಯಾಬಿನ್ (ಹಳದಿ)<br>ಸೂರ್ಯಕಾಂತಿ ಬೀಜ<br>ಗುರೆಳ್ಳು (ಹುಚ್ಚೆಳ್ಳು) (Nigerseed)<br>ಎಳ್ಳು (Sesamum) | ರಾಷ್ಟ್ರೀಯ ಕೃಷಿ ಸಹಕಾರ ಮಾರುಕಟ್ಟೆ ಮಹಾ ಮಂಡಳಿ, ಬೆಂ. (NAFED) | ಕರ್ನಾಟಕ ರಾಜ್ಯ ಸಹಕಾರಿ ಎಣ್ಣೆ ಬೀಜಗಳ ಬೆಳೆಗಾರರ ಮಹಾ ಮಂಡಳಿ, ಬೆಂಗಳೂರು (K O F) |
| 4. | **ಹತ್ತಿ (Raw cotton)**<br>ಹತ್ತಿ: ಎಫ್-414/ಜೆ-34/ಹೆಚ್-777<br>ಹತ್ತಿ: ಹೆಚ್-4 | ಭಾರತ ಆಹಾರ ನಿಗಮ | ಭಾರತ ಹತ್ತಿ ನಿಗಮ (Cotton Corporation of India) ಹುಬ್ಬಳ್ಳಿ/ರಾಯಚೂರು |

3. ಈ ಯೋಜನೆಯ ಅಡಿ ರೈತರಿಂದ ಖರೀದಿಸಲಾಗುವ ಆಹಾರಧಾನ್ಯಗಳ ಗುಣಮಟ್ಟವು ದಿ:25.8.2003ರ ಭಾರತ ಸರ್ಕಾರದ ಪತ್ರ ಸಂಖ್ಯೆ:8.8.2003 ಎಸ್ ಅಂಡ್ ಐ ದಲ್ಲಿ (ಪ್ರತಿ ಲಗತ್ತಿಸಿದೆ) ನಿಗದಿಪಡಿಸಿರುವ ನ್ಯಾಯವಾದ ಸರಾಸರಿ ಗುಣಮಟ್ಟದ್ದಾಗಿರತಕ್ಕದ್ದು (Fair Average Quality)

4. ಮೇಲೆ ತಿಳಿಸಿದ ಎಲ್ಲಾ ಬೆಳೆಗಳನ್ನು ರೈತರು ಇಚ್ಚಿಸಿದಲ್ಲಿ ಮೇಲಿನ ಸಂಸ್ಥೆಗಳಿಗೆ ಕನಿಷ್ಠ ಬೆಂಬಲ ಬೆಲೆಗಳಿಗೆ ಮಾರಾಟ ಮಾಡಬಹುದಾಗಿದೆ.

5. ದಿ:3.11.1998ರ ಸರ್ಕಾರದ ಆದೇಶದಲ್ಲಿ (ಪ್ರತಿ ಲಗತ್ತಿಸಿದೆ) ನೇಮಿಸಲಾಗಿರುವ ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಟಾಸ್ಕ್ ಫೋರ್ಸ್‌ಗಳು, ಸದರಿ ಆದೇಶದಲ್ಲಿ ಹೇಳಿರುವ ಕರ್ತವ್ಯಗಳನ್ನು 2003-04 ಖಾರೀಫ್ ಮಾರುಕಟ್ಟೆ ಋತುವಿನಲ್ಲೂ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್. ಉದಯಶಂಕರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1180

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಕೆ.ಕೆ. ಸುಬ್ಬಯ್ಯ ಅಧ್ಯಕ್ಷರು, ಹರದೂರು ಗ್ರಾ.ಪಂರವರ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ:**
1. ಎಡಿಜಿಪಿ:ಐಜಿಪಿ, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ:ಎಲ್‌ಓಕೆ:INV (ಜಿ):ಎಂ-71:ಸಿಆರ್ ಸಂಖ್ಯೆ:7:2001:ಎಂಡಿಕೆ:ದಿನಾಂಕ:4-6-2003.
2. ತನಿಖಾಧಿಕಾರಿಯ ವರದಿ ಸಂಖ್ಯೆ:ಕೆಎಲ್ಎ:ಎಂಎನ್.ಜಿ.ಎಸ್.ಪಿಸಿಆರ್:7-2001:ಮಡಿಕೇರಿ ದಿನಾಂಕ: 26-4-2003.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಕರಣದ ಸಾರಾಂಶ:**

ಶ್ರೀ ಕೆ.ಕೆ. ಸುಬ್ಬಯ್ಯ ಅಧ್ಯಕ್ಷರು ಹರದೂರು ಗ್ರಾಮ ಪಂಚಾಯತ್ ಇವರ ವಿರುದ್ಧ ಗುನ್ನೆ ಸಂಖ್ಯೆ:7-2001ರಲ್ಲಿ ಆರಕ್ಷಕ ನಿರೀಕ್ಷಕರು ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಮಡಿಕೇರಿ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 2,3), ಪೊಲೀಸ್ ಮಹಾ ನಿರೀಕ್ಷಕರು ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:4-6-2003, (ಉಲ್ಲೇಖ-1) ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ನಾನು ಶ್ರೀ ಸಿ.ಬಿ. ಮಲಾಜುರಿ ಪೊಲೀಸ್ ಅಧೀಕ್ಷಕರು ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಮಂಗಳೂರು ಇವರು ಉಲ್ಲೇಖಿತ ಪತ್ರ ಸಂ:ಕೆ.ಎಲ್.ಎ:ಎಂಎನ್.ಜಿ:ಎಸ್.ಪಿ:ಸಿಆರ್-7:2001 ಮಡಿಕೇರಿ ದಿನಾಂಕ: 26-4-2003 ರೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದ್ದೇನೆ.

ಅ) ಶ್ರೀ ಜಿ. ವಿಜಯ ಬಿನ್ ಗುಮ್ಮಣ್ಣ ಬಿ. ಗರಗಂದೂರು, ಗ್ರಾಮ, ಸೋಮವಾರಪೇಟೆ ತಾಲ್ಲೂಕು ಕೊಡಗು ಜಿಲ್ಲೆ ರವರ ಫಿರ್ಯಾದಿ ದಿನಾಂಕ:9-11-01

ಆ) ಪ್ರಥಮ ವರ್ತಮಾನ ವರದಿ ಮಡಿಕೇರಿ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ 7-2001

ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ: 13-11-2001

ಈ) ಟ್ರ್ಯಾಪ್‌ನ ಮಹಜರ್ ದಿನಾಂಕ: 13-11-2001

ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ ಲೋಕೆ:111-2001 ದಿನಾಂಕ:19-11-2001

ಊ) ಕೃತ್ಯ ನಡೆದ ಸ್ಥಳದ ನಕಾಶೆ:

ಋ) ಸಾಕ್ಷಿಗಳ ಹೇಳಿಕೆಗಳು:

1) ಶ್ರೀಯುತರಾದ ಜಿ.ವಿಜಯ, ಐ.ಆರ್. ಈರಪ್ಪ ವೈ ಭುವನೇಶ್, ಬಿ.ಎ.ರವಿಕುಮಾರ್, ಕುಮಾರಿ ಸಿ.ಕೆ. ಸುನಿತಾ, ಬಿ.ಯು. ಮಾಚಯ್ಯ,ಬಿ. ಜೋಯಪ್ಪ, ಎನ್.ಎ. ಜಗದೀಶ್ ಮತ್ತು ಎ.ಕೆ. ರಮೇಶ್.

ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ ಶ್ರೀ ಜಿ.ವಿಜಯ, ಗರಗಂದೂರು ಗ್ರಾಮ, ಹೊಸತೋಟ ಇವರ ದಿ: 22-10-2001ರ ಅರ್ಜಿ ವಿಷಯ: ಹೊಸತೋಟದಲ್ಲಿ ಸರಾಯಿ ಅಂಗಡಿ, ಬಗ್ಗೆ ಅನುಮತಿ.

ಏ) ಆಪಾದಿತರ ಸಮಜಾಯಿಷಿ ಹೇಳಿಕೆಗಳ ಕೆ.ಕೆ. ಸುಬ್ಬಯ್ಯ ಗ್ರಾಮಪಂಚಾಯತ್ ಅಧ್ಯಕ್ಷ ತನಿಖಾಧಿಕಾರಿಗಳಾದ ಶ್ರೀ ಎಂ.ಬಿ. ಬಸಪ್ಪ ಪೊಲೀಸ್ ನಿರೀಕ್ಷಕರು, ಕೆ.ಎಲ್.ಎ ಮಡಿಕೇರಿ ಇವರು ಶ್ರೀ ಎಂ.ಬಿ. ಅಪ್ಪಯ್ಯ ಗ್ರಾಮಪಂಚಾಯತ್, ಕಾರ್ಯದರ್ಶಿ ಮತ್ತು ಕೆ.ಕೆ. ಸುಬ್ಬಯ್ಯ ಗ್ರಾಮಪಂಚಾಯತ್ ಅಧ್ಯಕ್ಷರು ಹರದೂರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಆರಕ್ಷಕ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಮಡಿಕೇರಿ ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂ: 7-2001 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7 13,(1) (ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಗ್ರಾಮಪಂಚಾಯತ್ ಅಧ್ಯಕ್ಷರಾದ ಕೆ.ಕೆ. ಸುಬ್ಬಯ್ಯ ಫಿರ್ಯಾದಿಯಾದ ಶ್ರೀ ಜಿ. ವಿಜಯ ಬಿನ್ ಗುಮ್ಮಣ್ಣ ಬಿ. ಗರಗಂದೂರು ಗ್ರಾಮ, ಸೋಮವಾರಪೇಟೆ ತಾಲ್ಲೂಕು ಕೊಡಗು ಜಿಲ್ಲೆ ಇವರ ಹೊಸತೋಟದಲ್ಲಿ ಸರಾಯಿ ಅಂಗಡಿ ತೆರೆಯುವ ಬಗ್ಗೆ ಅನುಮತಿ ಕುರಿತು ಸರ್ಕಾರಿ ಕೆಲಸವನ್ನು ಮಾಡಲು ರೂ.500-00ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ನೌಕರನ:ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯ ಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:13-11-2001ರಂದು ಹರದೂರು ಗ್ರಾಮಪಂಚಾಯತ್, ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮ ಪಂಚಾಯತ್ ಅಧ್ಯಕ್ಷ ಇವರು ಅಕ್ರಮ ಸಂಭಾವನೆ. 500-00 ರೂಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಅಪಾದಿತ ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮಪಂಚಾಯತ್ ಅಧ್ಯಕ್ಷರು ಹರದೂರು ಗ್ರಾಮಪಂಚಾಯತ್ ಇವರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮರ್ಜನೆಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿ ಕ್ರಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.500-00 ಗಳನ್ನು ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮಪಂಚಾಯತ್ ಅಧ್ಯಕ್ಷರು ಹರದೂರು ಗ್ರಾಮಪಂಚಾಯತ್ ರಿಂದ ಹರದೂರು ಗ್ರಾಮ ಪಂಚಾಯತ್‌ದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7,13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ನಾನು ಮನಗಂಡಿದ್ದೇನೆ.

ಸಕ್ಷಮ ಪ್ರಾಧಿಕಾರವಾದ ನಾನು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳವನಾಗಿರುತ್ತೇನೆ ಹಾಗೂ ಈ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 ರಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಾಗಿರುತ್ತೇನೆ.

ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ರ ಅಡಿ ಆಪಾದಿತ ನೌಕರನಾದ ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮಪಂಚಾಯತ್ ಅಧ್ಯಕ್ಷರವರನ್ನು ಕಲಂ 7 ಮತ್ತು 13(1) (ಡಿ)ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ನಾನು ಹೊಂದಿರುತ್ತೇನೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:344:ಗ್ರಾಪಂಅ:2002, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2003**

ಆರೋಪಿಯಾದ ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮ ಪಂಚಾಯತ್ ಅಧ್ಯಕ್ಷರು ಹರದೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ನಾನು ಶ್ರೀ ಎಂ.ವೈ. ಘೋರ್ಪಡೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಕರ್ನಾಟಕ ಸರ್ಕಾರ ಶ್ರೀ ಕೆ.ಕೆ. ಸುಬ್ಬಯ್ಯ ಗ್ರಾಮ ಪಂಚಾಯತ್ ಅಧ್ಯಕ್ಷರು ಹರದೂರು ಇವರನ್ನು ಲಂಚ ನಿರೋಧಕ ಕಾಯ್ದೆ ಕಲಂ 7,13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡುತ್ತಿದ್ದೇನೆ.

ಮುಂದುವರಿದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ-1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 11-9-2003 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1181

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ರೈತರಿಗೆ ಪ್ಯಾಕೇಜ್ ರಿಯಾಯಿತಿ - 2003-2004ನೇ ಸಾಲಿನಲ್ಲಿ ಬರಪೀಡಿತ ಪ್ರದೇಶಗಳ ರೈತರಿಗೆ ಬರ ಪರಿಹಾರದ ಅಂಗವಾಗಿ ಭೂ ಅಭಿವೃದ್ಧಿ ಕೆಲಸಗಳಿಗಾಗಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ನೀಡಲಾದ ವಿಶೇಷ ಸಾಲದ ಮೇಲಿನ ಬಡ್ಡಿಯನ್ನು ಸಂಪೂರ್ಣವಾಗಿ ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ನೀಇ 93 ಸಿಎಎಂ 99, ಬೆಂಗಳೂರು ದಿನಾಂಕ: 16-12-2002.

**ಪ್ರಸ್ತಾವನೆ:**

ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಸತತ ಬರ ಪರಿಸ್ಥಿತಿಯಿಂದಾಗಿ ರೈತರು ಬಹಳ ಸಂಕಷ್ಟಕ್ಕೆ ಒಳಗಾಗಿರುವುದರಿಂದ, ರೈತರ ಹಿತರಕ್ಷಣೆ ಮಾಡುವ ಕುರಿತು ಸೂಕ್ತ ಪರಿಹಾರ / ರಿಯಾಯಿತಿಗಳನ್ನು ರೂಪಿಸಲು ಸಹಕಾರ ಸಚಿವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದ್ದು, ಈ ಸಮಿತಿಯು ಮಾನ್ಯ ಮುಖ್ಯಮಂತ್ರಿಗಳೊಂದಿಗೆ ಸಮಾಲೋಚಿಸಿ ಪ್ರಸಕ್ತ ಬರಗಾಲದ ದೃಷ್ಟಿಯಿಂದ ರೈತರಿಗೆ ನೀಡಬಹುದಾದ ರಿಯಾಯಿತಿಗಳ ಸಮಗ್ರ ಪ್ರಸ್ತಾವನೆಯನ್ನು ನೀಡಿದೆ. ಈ ಪ್ಯಾಕೇಜ್‌ನಲ್ಲಿ ರೈತರ ಕೆಲ ಬಾಕಿ ಮನ್ನಾ ಸೇರಿದಂತೆ 2002ರ ಹಿಂಗಾರು ಪ್ಯಾಕೇಜ್, ಮಾರುಕಟ್ಟೆ ಬೆಂಬಲ ಬೆಲೆ ಮತ್ತು ಪ್ರೋತ್ಸಾಹಕಾರಿ ಕಾರ್ಯಾಚರಣೆಗಳು ಸೇರಿದಂತೆ ಒಟ್ಟು ರೂ. 865 ಕೋಟಿಗಳ ಪ್ರಸ್ತಾವನೆಗಳನ್ನೊಳಗೊಂಡಿದ್ದು, ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 109 ಸಿಎಎಂ 2003 (ಭಾ), ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ರಾಜ್ಯವು ಕಳೆದ 2-3 ವರ್ಷಗಳಿಂದ ಸತತವಾಗಿ ಬರಗಾಲ ಎದುರಿಸುತ್ತಲಿದ್ದು, ರೈತರು ತುಂಬಾ ಸಂಕಷ್ಟಕ್ಕೆ ಒಳಗಾಗಿರುವ ಹಿನ್ನೆಲೆಯಲ್ಲಿ ಮಲಪ್ರಭಾ ಮತ್ತು ಘಟಪ್ರಭಾ ಯೋಜನೆ, ಬೆಳಗಾಂ ಮತ್ತು ಕೃಷ್ಣಾ ಮೇಲ್ದಂಡೆ ಯೋಜನೆ ಭೀಮರಾಯನಗುಡಿಯ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳ ವ್ಯಾಪ್ತಿಯಲ್ಲಿ ಬರುವ ಅನರ್ಹ ರೈತರ ಭೂ ಅಭಿವೃದ್ಧಿ ಕೆಲಸಗಳಿಗಾಗಿ ಮೇಲ್ಕಂಡ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳ ವತಿಯಿಂದ ನೀಡಲಾಗಿದ್ದ ವಿಶೇಷ ಸಾಲದ ಮೇಲಿನ ಬಾಕಿ ಇರುವ ಬಡ್ಡಿಯನ್ನು ಸಂಪೂರ್ಣವಾಗಿ ಮನ್ನಾ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ವಾಸುದೇವ ಹೆಬ್ಬಾರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕಾಡಾ).

ಪಿ.ಆರ್. 1182

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** 2002-03ನೇ ಸಾಲಿನಲ್ಲಿ ಒಳನಾಡು ಮೀನುಗಾರಿಕೆಯಲ್ಲಿ ಬರಗಾಲದಿಂದ ನಷ್ಟ ಹೊಂದಿದ ಮೀನುಗಾರರಿಗೆ ಮತ್ತು ಮೀನು ಕೃಷಿಕರಿಗೆ ಪರಿಹಾರ ನೀಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 69 ಟಿಎಸ್‌ವೈ 2003 ದಿನಾಂಕ:28-7-2003 ಮತ್ತು
2. ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ರವರ ಪತ್ರದ ಸಂಖ್ಯೆ:ಹಗುಪ/2/28/03-04 ದಿನಾಂಕ 1-7-03 ಮತ್ತು 7-8-03.

**ಪ್ರಸ್ತಾವನೆ:**

2002-03ನೇ ಸಾಲಿನಲ್ಲಿ ರಾಜ್ಯದಲ್ಲಿ ಮಳೆಯ ಅಭಾವದಿಂದ ತೀವ್ರ ಬರ ಪರಿಸ್ಥಿತಿ ಉಂಟಾಗಿ ರಾಜ್ಯದ ಬಹುತೇಕ ಜಲ ಸಂಪನ್ಮೂಲಗಳು ಬತ್ತಿ ಹೋಗಿರುತ್ತವೆ. 2002-03ನೇ ಸಾಲಿನಲ್ಲಿ ಬರ ಪರಿಸ್ಥಿತಿ ಇದ್ದ ಹಿನ್ನಲೆಯಲ್ಲಿ ರಾಜ್ಯದ 25 ಜಿಲ್ಲೆಗಳ ಒಟ್ಟು 159 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶಗಳೆಂದು ಸರ್ಕಾರವು ಘೋಷಿಸಿದೆ. ಮೀನುಗಾರಿಕೆಯನ್ನೇ ಅವಲಂಬಿಸಿರುವ ಸಾವಿರಾರು ಒಳನಾಡು ಮೀನುಗಾರರು ಮತ್ತು ಮೀನು ಕೃಷಿಕರಿಗೆ ತೀವ್ರ ಆರ್ಥಿಕ ನಷ್ಟ ಉಂಟಾಗಿದ್ದು ಸಂಕಷ್ಟಕ್ಕೊಳಗಾಗಿದ್ದಾರೆ. ಪ್ರತಿ ವರ್ಷದಂತೆ 2002-03ನೇ ಸಾಲಿನಲ್ಲಿಯೂ ಸಹ ಮೀನುಗಾರಿಕೆ ಇಲಾಖೆಯ ವತಿಯಿಂದ ರಾಜ್ಯದಲ್ಲಿರುವ ಎಲ್ಲಾ ಕೆರೆಗಳ, ನದಿಗಳ ಮತ್ತು ಜಲಾಶಯಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆ ಅಥವಾ ಟೆಂಡರ್ ಹರಾಜು ಮೂಲಕ ವಿಲೇವಾರಿ ಮಾಡಲಾಗಿರುತ್ತದೆ. ಸಕಾಲದಲ್ಲಿ ಮಳೆಯಾಗಿ ಈ ಜಲಸಂಪನ್ಮೂಲಗಳಿಗೆ ನೀರು ಬಂದು ಮೀನು ಕೃಷಿಗೆ ಅನುಕೂಲವಾಗಬಹುದೆಂಬ ನಿರೀಕ್ಷೆಯಿಂದ ಹಲವಾರು ಮೀನು ಕೃಷಿಕರು ಇಲಾಖಾ ವತಿಯಿಂದ ನಡೆಸಿದ ಟೆಂಡರ್-ಕಂ-ಹರಾಜುಗಳಲ್ಲಿ ಭಾಗವಹಿಸಿ ಗರಿಷ್ಟ ಬಿಡ್ ಅಥವಾ ಗುತ್ತಿಗೆ ಮೊತ್ತಕ್ಕೆ ಸದರಿ ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕನ್ನು ಪಡೆದು ಅಲ್ಪಸ್ವಲ್ಪ ನೀರಿದ್ದ ಜಲಸಂಪನ್ಮೂಲಗಳಿಗೆ ಮೀನುಮರಿಗಳನ್ನು ಖರೀದಿಸಿ ಬಿತ್ತನೆ ಮಾಡಿರುತ್ತಾರೆ. ಆದರೆ 2002-03ನೇ ಸಾಲಿನಲ್ಲಿ ರಾಜ್ಯದ ಯಾವುದೇ ಭಾಗದಲ್ಲಿಯೂ ಸಹ ಸಾಕಷ್ಟು ಪ್ರಮಾಣದಲ್ಲಿ ಮಳೆ ಬೀಳದೆ ಗುತ್ತಿಗೆ ಅಥವಾ

ಟೆಂಡರ್:ಹರಾಜಿನಲ್ಲಿ ಸದರಿ ಜಲಸಂಪನ್ಮೂಲಗಳನ್ನು ಪಡೆದಿದ್ದ ಮೀನು ಕೃಷಿಕರು ಹಾಗೂ ಸಂಘ ಸಂಸ್ಥೆಗಳು ತೊಡಗಿಸಿದ್ದ ಬಂಡವಾಳವು ಕೈಗೆಟಕದೆ ಮತ್ತು ಮೀನುಮರಿಗಳ ಬೆಳವಣಿಗೆ ಆಗದೇ ಪೂರ್ಣ ನಷ್ಟ ಹೊಂದಿದ್ದಾರೆ. ಇನ್ನೂ ಕೆಲವು ಪ್ರಕರಣಗಳಲ್ಲಿ ಬಿಡ್ ಅಥವಾ ಗುತ್ತಿಗೆದಾರರು ಗುತ್ತಿಗೆಗೆ ಪಡೆದ ಜಲಸಂಪನ್ಮೂಲಗಳಿಗೆ ನೀರು ಬರಬಹುದೆಂದು ನಿರೀಕ್ಷೆಯಿಂದ ಬಿಡ್ ಅಥವಾ ಗುತ್ತಿಗೆ ಹಣ ಸರ್ಕಾರಕ್ಕೆ ಪಾವತಿಸಿ ಮಳೆಯ ಅಭಾವದಿಂದಾಗಿ ಸದರಿ ಜಲಸಂಪನ್ಮೂಲಗಳು ಒಣಗಿ ನಷ್ಟವನ್ನು ಅನುಭವಿಸಿದ್ದಾರೆ. ಮಳೆಯ ಅಭಾವದಿಂದಾಗಿ 2002-03ನೇ ಸಾಲಿಗೆ ಜಲಸಂಪನ್ಮೂಲಗಳ ವಿಲೇವಾರಿಯಿಂದ ಮತ್ತು ಮೀನುಮರಿ ಸರಬರಾಜಿನಿಂದ ಬಂದ ಆದಾಯವು ಗಣನೀಯವಾಗಿ ಇಳಿದಿದ್ದು, ಇದು ಮೀನು ಉತ್ಪಾದನೆಯ ಮೇಲೆ ನೇರ ಪರಿಣಾಮ ಬೀರಿದೆ. 2002-03ನೇ ಸಾಲಿನಲ್ಲಿ ಕೇವಲ 86000 ಮೆ.ಟನ್‌ಗಳಷ್ಟು ಒಳನಾಡು ಜಮೀನು ಉತ್ಪಾದನೆಯಾಗಿದೆಯೆಂದು ಅಂದಾಜು ಮಾಡಲಾಗಿದ್ದು, ಹಿಂದಿನ ಸಾಲುಗಳಿಗೆ ಹೋಲಿಸಿದರೆ ಅದು ಸುಮಾರು 40,000 ಮೆ.ಟನ್‌ಗಳಷ್ಟು ಕಡಿಮೆಯಾಗಿದೆ. ಮೇಲಾಗಿ ಮಳೆ ಬಾರದೆ ಜಲಸಂಪನ್ಮೂಲಗಳು ಬತ್ತಿ ಹೋಗಿದ್ದರಿಂದ ಮೀನು ಬೆಳವಣಿಗೆಗಾಗಿ ಸಾಕಷ್ಟು ಸಮಯ ಸಿಗದೆ ಮೀನು ಬೆಳವಣಿಗೆ ಕುಂಠಿತವಾಗಿ ಅವುಗಳ ಮೌಲ್ಯವು ಮಾರುಕಟ್ಟೆಯಲ್ಲಿ ಇಳಿದು ಮೀನುಗಾರರಿಗೆ ಮತ್ತು ಮೀನು ಕೃಷಿಕರಿಗೆ ನಷ್ಟ ಉಂಟಾಗಿದೆ. ಸದರಿ ಸಾಲಿನಲ್ಲಿ ಮಳೆಯ ಅಭಾವದಿಂದ ಜಲಸಂಪನ್ಮೂಲಗಳಿಗೆ ನೀರು ಬಾರದೆ ಲಭ್ಯವಿದ್ದ ಅಲ್ಪಸ್ವಲ್ಪ ನೀರಿನಲ್ಲಿ ಮೀನುಮರಿಗಳು ಸರಿಯಾಗಿ ಬೆಳವಣಿಗೆಯಾಗದೆ ಮೀನು ಕೃಷಿಕರಿಗೆ ಅವರು ಸರ್ಕಾರಕ್ಕೆ ಕಟ್ಟಿದ ಗುತ್ತಿಗೆ ಹಣ, ಬಿತ್ತನೆ ಮಾಡಿದ ಮೀನುಮರಿ ಬಾಬ್ತು ಮತ್ತು ಕಡಿಮೆ ಬೆಲೆಗಳಿಗೆ ಮೀನು ಮಾರಾಟದಿಂದ ಸಾಕಷ್ಟು ನಷ್ಟ ಉಂಟಾಗಿದೆ. ಇದೇ ಸಾಲಿನಲ್ಲಿ ಸುಮಾರು 2165 ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕು ವಿಲೇವಾರಿಯಾಗಿದ್ದು-ಮೀನು ಕೃಷಿಕರು ಅವುಗಳನ್ನು ಅಭಿವೃದ್ಧಿ ಪಡಿಸಲು ಸುಮಾರು ರೂ.322.00 ಲಕ್ಷಗಳ ಬಂಡವಾಳ ಹೂಡಿ ಸದರಿ ಜಲಸಂಪನ್ಮೂಲಗಳಿಗೆ ನೀರು ಬಾರದೇ ನಷ್ಟ ಹೊಂದಿರುತ್ತಾರೆ. ಒಟ್ಟಾರೆ 2002-03ನೇ ಸಾಲಿನಲ್ಲಿ ಬರಗಾಲದ ಪ್ರಯುಕ್ತ ಒಳನಾಡು ಮೀನು ಉತ್ಪಾದನೆಯಿಂದ ಮೀನುಗಾರರಿಗೆ ಮತ್ತು ಮೀನು ಕೃಷಿಕರಿಗೆ ಬರುವ ಆದಾಯದಲ್ಲಿ ಸುಮಾರು ರೂ.201.00 ಕೋಟಿಗಳಷ್ಟು ಕೊರತೆ ಉಂಟಾಗಿದೆಯೆಂದು ಅಂದಾಜು ಮಾಡಲಾಗಿದೆ.

ಈ ಕಾರಣಗಳಿಂದ 2003-04ನೇ ಸಾಲಿನಲ್ಲಿ ಮೀನು ಕೃಷಿ ಕೈಗೊಳ್ಳಲು ಸಾಕಷ್ಟು ಬಂಡವಾಳ ಇಲ್ಲದೆ ಹಲವಾರು ಮೀನುಗಾರರು ಮತ್ತು ಮೀನು ಕೃಷಿಕರು ತುಂಬಾ ತೊಂದರೆಯಲ್ಲಿದ್ದಾರೆ. ಈ ರೀತಿ ವಿಪರೀತ ನಷ್ಟ ಹೊಂದಿದ ಮೀನು ಕೃಷಿಕರು ಮತ್ತು ಮೀನುಗಾರರು ಶಾಸಕರುಗಳ ಹಾಗೂ ಜನ ಪ್ರತಿನಿಧಿಗಳ ಮೂಲಕ ಮಾನ್ಯ ಮೀನುಗಾರಿಕೆ ಮತ್ತು ಬಂದರು ಸಚಿವರಿಗೆ ಹಾಗೂ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರಿಗೆ ಶಿಫಾರಸ್ಸು ಪತ್ರಗಳನ್ನು ಬರೆಸುತ್ತಾ 2002-03ನೇ ಸಾಲಿನಲ್ಲಿ ಆಗಿರುವ ನಷ್ಟವನ್ನು ಸರ್ಕಾರದಿಂದ ಭರಿಸಿ ಕೊಡುವಂತೆ ವಿನಂತಿಸಿರುತ್ತಾರೆಂದು ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ರವರು ಮೇಲೆ ಓದಲಾದ ಪತ್ರಗಳಲ್ಲಿ ತಿಳಿಸಿರುತ್ತಾರೆ. ಈ ವಿಷಯವನ್ನು ರಾಜ್ಯ ಸಚಿವ ಸಂಪುಟದ ಮುಂದೆ ಪ್ರಸ್ತಾಪಿಸಲಾಗಿ ಸಚಿವ ಸಂಪುಟವು ಸದರಿ ಜಲಸಂಪನ್ಮೂಲಗಳ ಮೀನುಪಾಶುವಾರು ಹಕ್ಕನ್ನು ಮತ್ತೊಂದು ವರ್ಷಕ್ಕೆ ವಿಸ್ತರಿಸಲು ನಿರ್ಣಯವನ್ನು ಕೈಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 146 ಮೀಇಇ 2003, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ನಷ್ಟವನ್ನು ಅನುಭವಿಸಿ ತೊಂದರೆಗೆ ಒಳಗಾಗಿರುವ ಒಳನಾಡು ಮೀನುಗಾರರಿಗೆ ಮತ್ತು ಮೀನು ಕೃಷಿಕರಿಗೆ ಪರಿಹಾರವನ್ನು ನೀಡುವ ಹಿತದೃಷ್ಟಿಯಿಂದ 2002-03ನೇ ಸಾಲಿನಲ್ಲಿ ರಾಜ್ಯ ಸರ್ಕಾರವು ಬರಪೀಡಿತ ಪ್ರದೇಶಗಳೆಂದು ಘೋಷಿಸಿದ ಒಟ್ಟು 159 ತಾಲ್ಲೂಕುಗಳಿಗೆ ಮಾತ್ರ ಸಿಮೀತಗೊಳಿಸಿ 2002-03ನೇ ಸಾಲಿನಲ್ಲಿ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೂಲಕ ವಿಲೇಗೊಳಿಸಿದ ಮತ್ತು ನವೀಕರಿಸಿದ ಎಲ್ಲಾ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ಅವಧಿಯನ್ನು ಮುಂದಿನ ಒಂದು ವರ್ಷದ ಅವಧಿಗೆ ಅಂದರೆ 2003-04ನೇ ಸಾಲಿಗೆ (ದಿನಾಂಕ:1-7-2003 ರಿಂದ 30-6-2004 ರವರೆಗೆ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ವಿಸ್ತರಿಸಿ ಆದೇಶಿಸಿದೆ.

**ಷರತ್ತುಗಳು**

1) ರಾಜ್ಯ ಸರ್ಕಾರವು ಘೋಷಿಸಿದ ಬರಪೀಡಿತ 159 ತಾಲ್ಲೂಕುಗಳಲ್ಲಿನ ಎಲ್ಲಾ ಜಲಸಂಪನ್ಮೂಲಗಳಿಗೆ ಸಂಬಂಧಿಸಿದಂತೆ 2002-03ನೇ ಸಾಲಿನಲ್ಲಿ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೊತ್ತವನ್ನು ಪಾವತಿಸಿದ ಮತ್ತು ನವೀಕರಿಸಿದ ಪ್ರಕರಣಗಳಿಗೆ ಮಾತ್ರ ಈ ವಿಸ್ತರಣೆ ಅನ್ವಯಿಸುತ್ತದೆ.
2) 2002-2003 ರಿಂದ 2004-2005ನೇ ಸಾಲಿನವರೆಗೆ ವಿಲೇಗೊಳಿಸಿದ ಕೆರೆಗಳ ಮೀನು ಪಾಶುವಾರು ಹಕ್ಕನ್ನು 2003-2004 ರಿಂದ 2005-2006ರವರೆಗೆ ಎಂದು ಪರಿಗಣಿಸಿಕೊಂಡು 2002-2003ನೇ ಸಾಲಿಗೆ ಪಾವತಿಸಿದ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೊತ್ತವನ್ನು 2003-2004ನೇ ಸಾಲಿಗೆ ಹೊಂದಾಣಿಕೆ ಮಾಡಿಕೊಂಡು ತದನಂತರ ಸಾಲುಗಳಿಗೆ ಕ್ರಮವಾಗಿ ಶೇ.10ರಷ್ಟು ಹೆಚ್ಚಿಸಿ ಟೆಂಡರ್-ಕಂ-ಹರಾಜು ಅಥವಾ ಗುತ್ತಿಗೆಯನ್ನು ನವೀಕರಿಸತಕ್ಕದ್ದು.
3) 2002-2003ನೇ ಸಾಲಿನಲ್ಲಿ 2ನೇ ವರ್ಷದ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜಿನ ಅವಧಿಯನ್ನು ನವೀಕರಿಸಿದ್ದ ಪ್ರಕರಣಗಳನ್ನು 2003-2004ನೇ ಸಾಲಿಗೆ 2ನೇ ವರ್ಷ ಎಂದು ಪರಿಗಣಿಸಿ 2002-2003ನೇ ಸಾಲಿಗೆ ಪಾವತಿಸಿದ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೊತ್ತವನ್ನು 2003-2004ನೇ ಸಾಲಿಗೆ ಹೊಂದಾಣಿಕೆ ಮಾಡಿಕೊಂಡು ತದನಂತರದ ಸಾಲಿಗೆ ಹೊಂದಾಣಿಕೆ ಮಾಡಿಕೊಂಡ ಮೊತ್ತಕ್ಕೆ ಶೇ.10ರಷ್ಟು ಹೆಚ್ಚಿಸಿ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜನ್ನು ನವೀಕರಿಸತಕ್ಕದ್ದು.
4) 2002-2003ನೇ ಸಾಲಿನಲ್ಲಿ 3ನೇ ವರ್ಷದ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಅವಧಿಯನ್ನು ನವೀಕರಿಸಿದ ಪ್ರಕರಣಗಳನ್ನು 2003-2004ನೇ ಸಾಲಿಗೆ 3ನೇ ವರ್ಷ ಎಂದು ಪರಿಗಣಿಸಿ 2002-2003ನೇ ಸಾಲಿಗೆ ಪಾವತಿಸಿದ ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೊತ್ತವನ್ನು 2003-2004ನೇ ಸಾಲಿಗೆ ಹೊಂದಾಣಿಕೆ ಮಾಡಿಕೊಂಡು ಟೆಂಡರ್-ಕಂ-ಹರಾಜು ಅಥವಾ ಗುತ್ತಿಗೆಯನ್ನು ನವೀಕರಿಸತಕ್ಕದ್ದು.

5) ಜಿಲ್ಲಾ ಪಂಚಾಯತ್ ಮತ್ತು ಮೀನುಗಾರಿಕೆ ಇಲಾಖಾ ವ್ಯಾಪ್ತಿಗೆ ಬರುವ ಎಲ್ಲಾ ಜಲಸಂಪನ್ಮೂಲಗಳಿಗೆ ಮಾತ್ರ ಮೇಲ್ಕಾಣಿಸಿದ ವಿಸ್ತರಣೆ ಅನ್ವಯವಾಗುತ್ತದೆ.

6) ಮೇಲ್ಕಾಣಿಸಿದ ಪರಿಹಾರಕ್ಕೆ **ಅನ್ವಯಿಸದ** ಜಲಸಂಪನ್ಮೂಲಗಳನ್ನು ಪ್ರಸಕ್ತ ಸಾಲಿನಲ್ಲಿ (2003-04ರಲ್ಲಿ) ನಿಯಮಾನುಸಾರ ವಿಲೇಗೊಳಿಸಲು ಕ್ರಮ ವಹಿಸುವುದು.

7) 2002-03ನೇ ಸಾಲಿಗೆ ಬರದಿಂದ ನಷ್ಟ ಹೊಂದಿದ ಸಣ್ಣ ಜಲಸಂಪನ್ಮೂಲಗಳ, ಅಂದರೆ 10 ಹೆಕ್ಟೇರ್‌ಗಳ ಜಲವಿಸ್ತೀರ್ಣದವರೆಗಿನ ಜಲಸಂಪನ್ಮೂಲಗಳ ಫಲಾನುಭವಿಗಳಿಗೆ ಸಂಬಂಧಪಟ್ಟ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ತಮ್ಮ ವ್ಯವಸ್ಥಾಪಕ ಸಮಿತಿಗಳ ಒಪ್ಪಿಗೆಯನ್ನು ಪಡೆದು ಮೇಲೆ ತಿಳಿಸಿದಂತೆ ಪರಿಹಾರ ನೀಡಲು ಸೂಕ್ತ ಕ್ರಮ ಕೈಗೊಳ್ಳುವುದು.

ಈ ಪರಿಹಾರವನ್ನು ವಿಸ್ತರಿಸಿರುವ ಬರಪೀಡಿತ 159 ತಾಲ್ಲೂಕುಗಳ ಪಟ್ಟಿಯನ್ನು ಈ ಆದೇಶದ **ಅನುಬಂಧದಲ್ಲಿ** ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟದ ಪ್ರಕರಣ ಸಂಖ್ಯೆ:ಸಿ.276/2003ರಲ್ಲಿನ ತೀರ್ಮಾನದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 146 ಮೀಇಇ 2003 ದಿನಾಂಕ: 10ನೇ ಸೆಪ್ಟೆಂಬರ್ 2003ರ ಅನುಬಂಧ**

| ಜಿಲ್ಲೆಯ ಹೆಸರು | ತಾಲ್ಲೂಕುಗಳ ಸಂಖ್ಯೆ | ಬರಪೀಡಿತವೆಂದು ಘೋಷಿಸಲಾದ ತಾಲ್ಲೂಕುಗಳ ಹೆಸರು | ಜಿಲ್ಲೆಯ ಹೆಸರು | ತಾಲ್ಲೂಕುಗಳ ಸಂಖ್ಯೆ | ಬರಪೀಡಿತವೆಂದು ಘೋಷಿಸಲಾದ ತಾಲ್ಲೂಕುಗಳ ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 1.ಬೆಂಗಳೂರು (ಗ್ರಾ) | 08 | 1.ದೇವನಹಳ್ಳಿ<br>2.ಹೊಸಕೋಟೆ<br>3.ಮಾಗಡಿ<br>4.ಕನಕಪುರ<br>5.ದೊಡ್ಡಬಳ್ಳಾಪುರ<br>6.ನೆಲಮಂಗಲ<br>7.ರಾಮನಗರ<br>8.ಚನ್ನಪಟ್ಟಣ | 4.ಮೈಸೂರು | 07 | 30.ಟಿ.ನರಸೀಪುರ<br>31.ಕೆ.ಆರ್.ನಗರ<br>32.ಹೆಚ್.ಡಿ.ಕೋಟೆ<br>33.ಪಿರಿಯಾಪಟ್ಟಣ<br>34.ನಂಜನಗೂಡು<br>35.ಮೈಸೂರು<br>36.ಹುಣಸೂರು |
| 2.ಕೋಲಾರ | 11 | 9.ಕೋಲಾರ<br>10.ಬಾಗೇಪಲ್ಲಿ<br>11.ಬಂಗಾರಪೇಟೆ<br>12.ಗೌರಿಬಿದನೂರು<br>13.ಗುಡಿಬಂಡೆ<br>14.ಶಿಡ್ಲಘಟ್ಟ<br>15.ಶ್ರೀನಿವಾಸಪುರ<br>16.ಚಿಕ್ಕಬಳ್ಳಾಪುರ<br>17.ಚಿಂತಾಮಣಿ<br>18.ಮುಳಬಾಗಿಲು<br>19.ಮಾಲೂರು | 5.ಮಂಡ್ಯ | 07 | 37.ಕೆ.ಆರ್.ಪೇಟೆ<br>38.ಮದ್ದೂರು<br>39.ಮಳವಳ್ಳಿ<br>40.ಮಂಡ್ಯ<br>41.ಪಾಂಡವಪುರ<br>42.ನಾಗಮಂಗಲ<br>43.ಶ್ರೀರಂಗಪಟ್ಟಣ |
| 3.ತುಮಕೂರು | 10 | 20.ಕುಣಿಗಲ್<br>21.ತುರುವೇಕೆರೆ<br>22.ಸಿ.ಎನ್.ಹಳ್ಳಿ<br>23.ಮಧುಗಿರಿ<br>24.ಪಾವಗಡ<br>25.ಶಿರಾ<br>26.ಗುಬ್ಬಿ<br>27.ಕೊರಟಗೆರೆ<br>28.ತಿಪಟೂರು<br>29.ತುಮಕೂರು | 6.ಬಳ್ಳಾರಿ | 07 | 44.ಶಿರುಗುಪ್ಪ<br>45.ಹಗರಿಬೊಮ್ಮನಹಳ್ಳಿ<br>46.ಬಳ್ಳಾರಿ<br>47.ಹಡಗಲಿ<br>48.ಕುಡ್ಲಗಿ<br>49.ಸಂಡೂರು<br>50.ಹೊಸಪೇಟೆ |

| 1 | 2 | 3 | 4 | 5 | 6 |
|---|---|---|---|---|---|
| 7.ಚಿತ್ರದುರ್ಗ | 06 | 51.ಚಿತ್ರದುರ್ಗ<br>52.ಚಳ್ಳಕೆರೆ<br>53.ಹೊಸದುರ್ಗ<br>54.ಮೊಳಕಾಲ್ಮೂರು<br>55.ಹಿರಿಯೂರು<br>56.ಹೊಳಲ್ಕೆರೆ | 14.ಚಿಕ್ಕಮಗಳೂರು | 05 | 96.ಕಡೂರು<br>97.ಚಿಕ್ಕಮಗಳೂರು<br>98.ಮೂಡಿಗೆರೆ<br>99.ನರಸಿಂಹರಾಜಪುರ<br>100.ತರೀಕೆರೆ |
| 8.ದಾವಣಗೆರೆ | 06 | 57.ದಾವಣಗೆರೆ<br>58.ಹರಿಹರ<br>59.ಜಗಳೂರು<br>60.ಹರಪನಹಳ್ಳಿ<br>61.ಹೊನ್ನಾಳ್ಳಿ<br>62.ಚನ್ನಗಿರಿ | 15.ಬಾಗಲಕೋಟೆ | 06 | 101.ಬಾದಾಮಿ<br>102.ಬಾಗಲಕೋಟೆ<br>103.ಬಿಳಗಿ<br>104.ಹುನಗುಂದ್<br>105.ಮುದೋಳ್<br>106.ಜಮಖಂಡಿ |
| 9.ಚಾಮರಾಜ ನಗರ | 04 | 63.ಗುಂಡ್ಲುಪೇಟೆ<br>64.ಕೊಳ್ಳೇಗಾಲ<br>65.ಚಾಮರಾಜನಗರ<br>66.ಯಳಂದೂರು | 16.ಬಿಜಾಪುರ | 05 | 107.ಇಂಡಿ<br>108.ಬಿಜಾಪುರ<br>109.ಮುದ್ದೇಬಿಹಾಳ್<br>110.ಸಿಂಧಗಿ<br>111.ಬಸವನ ಬಾಗೇವಾಡಿ |
| 10.ಬೆಳಗಾವಿ | 10 | 67.ಹುಕ್ಕೇರಿ<br>68.ಬೈಲಹೊಂಗಲ<br>69.ಸವದತ್ತಿ<br>70.ರಾಮದುರ್ಗ<br>71.ಅಥಣಿ<br>72.ಬೆಳಗಾವಿ<br>73.ಗೋಕಾಕ್<br>74.ಖಾನಪುರ<br>75.ಚಿಕ್ಕೋಡಿ<br>76.ರಾಯಬಾಗ್ | 17.ಗದಗ | 05 | 112.ಗದಗ<br>113.ಮುಂಡರಗಿ<br>114.ನರಗುಂದ<br>115.ರೋಣ<br>116.ಶಿರಹಟ್ಟಿ |
| 11.ಕೊಪ್ಪಳ | 04 | 77.ಕೊಪ್ಪಳ<br>78.ಗಂಗಾವತಿ<br>79.ಯಲಬುರ್ಗಾ<br>80.ಕುಷ್ಟಗಿ | 18.ಹಾವೇರಿ | 07 | 117.ರಾಣೇಬೆನ್ನೂರು<br>118.ಬ್ಯಾಡಗಿ<br>119.ಹಾನಗಲ್<br>120.ಹಾವೇರಿ<br>121.ಹಿರೇಕೆರೂರು<br>122.ಸವಣೂರು<br>123.ಶಿಗ್ಗಾಂವಿ |
| 12.ರಾಯಚೂರು | 05 | 81.ಲಿಂಗಸುಗೂರು<br>82.ಮಾನ್ವಿ<br>83.ಸಿಂಧನೂರು<br>84.ದೇವದುರ್ಗ<br>85.ರಾಯಚೂರು | 19.ಹಾಸನ | 08 | 124.ಚನ್ನರಾಯಪಟ್ಟಣ<br>125.ಬೇಳೂರು<br>126.ಹಾಸನ<br>127.ಹೊಳೇನರಸೀಪುರ<br>128.ಅರಸೀಕೆರೆ<br>129.ಆಲೂರು<br>130.ಅರಕಲಗೂಡು<br>131.ಸಕಲೇಶಪುರ |
| 13.ಗುಲ್ಬರ್ಗ | 10 | 86.ಅಫಜಲ್‌ಪುರ್<br>87.ಆಳಂದ್<br>88.ಗುಲ್ಬರ್ಗ<br>89.ಶಹಾಪುರ್<br>90.ಶೋರಾಪುರ್<br>91.ಯಾದಗಿರ್<br>92.ಜೀವರ್ಗಿ<br>93.ಚಿಂಚೋಳ್ಳಿ<br>94.ಚಿತಾಪುರ್<br>95.ಸೇಡಂ | 20.ಧಾರವಾಡ | 05 | 132.ಧಾರವಾಡ<br>133.ಹುಬ್ಬಳ್ಳಿ<br>134.ಕಲಗಟಗಿ<br>135.ಕುಂದಗೊಳ್<br>136.ನವಲಗುಂದ್ |

| 1 | 2 | 3 | 4 | 5 | 6 |
|---|---|---|---|---|---|
| 21.ಬೆಂಗಳೂರು (ನಗರ) | 04 | 137.ಆನೇಕಲ್<br>138.ಬೆಂಗಳೂರು ಉತ್ತರ<br>139.ಬೆಂಗಳೂರು ದಕ್ಷಿಣ<br>140.ಕೃಷ್ಣರಾಜಪುರ | 23.ಉತ್ತರಕನ್ನಡ | 05 | 148.ಹಳಿಯಾಳ<br>149.ಮುಂಡಗೋಡ್<br>150.ಯಲ್ಲಾಪುರ<br>151.ಸಿರಸಿ<br>152.ಜೊಡ (ಸುಪಾ) |
| 22.ಶಿವಮೊಗ್ಗ | 07 | 141.ಭದ್ರಾವತಿ<br>142.ಸಾಗರ<br>143.ಶಿಕಾರಿಪುರ<br>144.ಶಿವಮೊಗ್ಗ<br>145.ಸೊರಬಾ | 24.ಬೀದರ್ | 05 | 153.ಔರಾದ್<br>154.ಭಾಲ್ಕಿ<br>155.ಬೀದರ್<br>156.ಬಸವಕಲ್ಯಾಣ<br>157.ಹುಮ್ನಾಬಾದ್ |
| | | 146.ಹೊಸನಗರ<br>147.ತೀರ್ಥಹಳ್ಳಿ | 25.ಕೊಡಗು | 02 | 158.ವಿರಾಜಪೇಟೆ<br>159.ಸೋಮವಾರಪೇಟೆ |

**ಡಿ. ಕಮಲಕುಮಾರ್**

ಪಿ.ಆರ್. 1183

ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೊನುಗಾರಿಕೆ)

## ಕಾರ್ಮಿಕ ಸಚಿವಾಲಯ

**ವಿಷಯ:** ಶ್ರೀ ಪಿ. ಗೋಪಾಲ ಸ್ವಾಮಿ, ಉದ್ಯೋಗಾಧಿಕಾರಿ, ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು ಇವರ ವಿರುದ್ಧ ದಾಖಲಾದ ಪ್ರಕರಣದ ಬಗ್ಗೆ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ಕಾಇ 21 ಇಟಿಎಕ್ಸ್ 2002 ದಿನಾಂಕ:11-4-2003.
2. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಬೆಂಗಳೂರು, ಇವರ ಪತ್ರ ಸಂಖ್ಯೆ.ಉತನಿ:ಉದ್ಯೋಗ: ಶಿಪ್ರ:ವಿ-9:ವಿವ-12:2002-03 ದಿ:27-3-2003.
3. ಸರ್ಕಾರಿ ಆದೇಶ ಸಂಖ್ಯೆ. ಕಾಇ 21 ಇಟಿಎಕ್ಸ್ 2002 ದಿನಾಂಕ:25-6-2003.
4. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ.ಸಿಒಎಮ್‌ಪಿಟಿ: ಉಪಲೋಕಾ:ಡಿಸಿಡಿ:178:2003 ಡಿಆರ್‌ಇ 4 ದಿನಾಂಕ:8-7-2003.

**ಪ್ರಸ್ತಾವನೆ:**

ಸರ್ಕಾರಿ ಆದೇಶ ದಿನಾಂಕ:11-4-2003 (ಓದಲಾಗಿದೆ ಕ್ರಮ ಸಂಖ್ಯೆ.1)ರಲ್ಲಿ ಕರ್ನಾಟಕ ಲಂಚ ನಿರೋದ ಕಾಯಿದೆ 1988 ಕಲಂ 19 (1) (ಬಿ) ಪ್ರಕಾರ ಪ್ರದತ್ತವಾದ ಅಧಿಕಾರ ಚಲಾಯಿಸಿ ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಪಿ.ಗೋಪಾಲಸ್ವಾಮಿ, ಹಿಂದಿನ ಉದ್ಯೋಗಾಧಿಕಾರಿ, ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು ಇವರನ್ನು ಲಂಚ ನಿರೋದ ಕಾಯಿದೆ 1988 ಕಲಂ 7, 13, (1) (ಜಿ) ಜೊತೆಯಲ್ಲಿ ಓದಲಾದ ಕಲಂ 13 (2) ಅಡಿಯಲ್ಲಿ ದಂಡನಾರ್ಹ ಅಕ್ರಮವೆಸಗಿರುವುದರಿಂದ ಸಕ್ರಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ದಿನಾಂಕ:27-3-2003ರ ಪತ್ರದಲ್ಲಿ (ಓದಲಾಗಿದೆ ಕ್ರಮ ಸಂಖ್ಯೆ.2). ಶ್ರೀ ಪಿ.ಗೋಪಾಲಸ್ವಾಮಿ, ಉದ್ಯೋಗಾಧಿಕಾರಿ ಇವರ ಅಮಾನತ್ತಿನ ಅವಧಿ 9 ತಿಂಗಳುಗಿಂತಲೂ ಹೆಚ್ಚಾಗಿದ್ದು ಜೊತೆಗೆ ಇಲಾಖೆಯ ಹಲವಾರು ಅಧೀನ ಕಛೇರಿಗಳಲ್ಲಿ ಉದ್ಯೋಗಾಧಿಕಾರಿ ಹುದ್ದೆ ಖಾಲಿ ಇದ್ದು ಇವರ ಜವಾಬ್ದಾರಿಯನ್ನು ಬಹುತೇಕ ಕಛೇರಿಗಳಲ್ಲಿ ಸಹಾಯಕ ಉದ್ಯೋಗಾಧಿಕಾರಿಗಳು ಹೆಚ್ಚುವರಿಯಾಗಿ ಕಾರ್ಯನಿರ್ವಹಿಸುತ್ತಿರುವುದಾಗಿ ಹಾಗೂ ಕಛೇರಿಯ ದೈನಂದಿನ ಕಾರ್ಯದಲ್ಲಿ ಅಡಚಣೆ ಉಂಟಾಗುವುದನ್ನು ಸದರಿ ಅಧಿಕಾರಿಯವರ ಅಮಾನತ್ತನ್ನು ತೆರವುಗೊಳಿಸಿ ಚಾಮರಾಜನಗರ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಖಾಲಿ ಇರುವ ಉದ್ಯೋಗಾಧಿಕಾರಿ ಹುದ್ದೆಗೆ ನೇಮಕ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರಿ ಆದೇಶ ದಿ:25-6-2003 (ಓದಲಾಗಿದೆ ಕ್ರಮ ಸಂಖ್ಯೆ.3) ಶ್ರೀ ಪಿ.ಗೋಪಾಲಸ್ವಾಮಿ, ಉದ್ಯೋಗಾಧಿಕಾರಿ ಇವರ ಅಮಾನತ್ತನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957ರ ನಿಯಮ ಮತ್ತು (5) (ಸಿ) ಪ್ರಕಾರ ಅಮಾನತ್ತನ್ನು ರದ್ದುಗೊಳಿಸಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಚಾಮರಾಜನಗರ, ಉದ್ಯೋಗ ವಿನಿಮಯ ಕೇಂದ್ರದಲ್ಲಿ ಖಾಲಿ ಇರುವ ಉದ್ಯೋಗಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ.

ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ದಿ:8-7-2003ರಲ್ಲಿ (ಓದಲಾಗಿದೆ ಕ್ರಮ ಸಂಖ್ಯೆ.4) ಶ್ರೀ ಪಿ. ಗೋಪಾಲಸ್ವಾಮಿ, ಉದ್ಯೋಗಾಧಿಕಾರಿ, ವೃತ್ತಿ ಅಧ್ಯಯನ ಕೇಂದ್ರ, ಕೆ.ಜಿ. ರಸ್ತೆ, ಬೆಂಗಳೂರು ಇವರ ವಿರುದ್ಧ ಮಾಡಲಾದ ಟ್ರಾಪ್ ಪ್ರಕರಣದ ಮೂಲ ವರದಿಯನ್ನು ಕಳುಹಿಸಿರುತ್ತಾರೆ. ಲೋಕಾಯುಕ್ತ ಕಾಯಿದೆ ಸೆಕ್ಷನ್ 12 (3) ಅಡಿಯಲ್ಲಿ ಶ್ರೀ ಪಿ. ಗೋಪಾಲಸ್ವಾಮಿ ಉದ್ಯೋಗಾಧಿಕಾರಿ, ಇವರಿಗೆ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸಲು ಕೋರಿರುತ್ತಾರೆ.

ಮೇಲೆ ತಿಳಿಸಿದ ವಿವರದ ಹಿನ್ನಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಶ್ರೀ ಪಿ. ಗೋಪಾಲಸ್ವಾಮಿ, ಉದ್ಯೋಗಾಧಿಕಾರಿ, ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಆಪಾದನೆಗೆ ಒಳಗಾಗಿರುವುದರಿಂದ ನಿಯಮಾನುಸಾರ ಸವಿವರ ವಿಚಾರಣೆಯನ್ನು ಕೈಗೊಳ್ಳಲು ಕರ್ನಾಟಕ ಲೋಕಾಯುಕ್ತ ಅವರಿಗೆ ವಹಿಸಲು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 21 ಇಟಿಎಕ್ಸ್ 2003, ಬೆಂಗಳೂರು ದಿನಾಂಕ: 10ನೇ ಸೆಪ್ಟೆಂಬರ್ 2003**

ಮಾನ್ಯ ಲೋಕಾಯುಕ್ತರವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಪಿ. ಗೋಪಾಲಸ್ವಾಮಿ; ಉದ್ಯೋಗಾಧಿಕಾರಿ, ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು (ಪ್ರಸ್ತುತ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಾಮರಾಜನಗರ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ನೇ ನಿಯಮ 14(ಎ) ಪ್ರಕಾರ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1184

**ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಈಶ್ವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧದ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 15 ಎಸ್ಇಎನ್ 2003, ದಿನಾಂಕ: 3-1-2001.
2. ಶ್ರೀ ಸಿ.ಎಂ. ಈಶ್ವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 14-6-2001.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ನಂಜನಗೂಡು ಉಪ ವಿಭಾಗಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಅವರ ವ್ಯಾಪ್ತಿಯಲ್ಲಿ ಬರುತ್ತಿದ್ದ ಯಳಂದೂರು ತಾಲ್ಲೂಕಿನ ಗುಂಬಳ್ಳಿ, ಗಣಿಗನೂರು, ಯರಿಯೂರು, ಕೆ. ದೇವರಹಳ್ಳಿ, ಯರಂಗಬಳ್ಳಿ ಗ್ರಾಮಗಳಲ್ಲಿ ಕರಿಕಲ್ಲಿನ ಅನಧಿಕೃತ ಗಣಿಗಾರಿಕೆ ಮತ್ತು ಸಾಗಾಣಿಕೆ ತಡೆಗಟ್ಟುವಲ್ಲಿ ವಿಫಲವಾಗಿ ಸರ್ಕಾರಕ್ಕೆ ಕೋಟ್ಯಾಂತರ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪ ಹಾಗೂ ಅನಧಿಕೃತ ಗಣಿಗಾರಿಕೆಯಿಂದ ಯಳಂದೂರು ತಾಲ್ಲೂಕಿನ ಗುಂಬಳ್ಳಿ, ಯರಿಯೂರು ಮತ್ತು ಗಣಿಗನೂರು ಗ್ರಾಮಗಳಲ್ಲಿ ಪುರಾತನ ಕಲ್ಲಿನ ಮಂಟಪ ಹಾಗೂ ದೇವಸ್ಥಾನಗಳಿಗೆ ಅಪಾಯವುಂಟು ಮಾಡಿದಾಗ ಪೂಜಾ ಸ್ಥಳಗಳ ರಕ್ಷಣೆಗಾಗಿ, ಉಪ ವಿಭಾಗ ಮಟ್ಟದ ಮುಜರಾಯಿ ಅಧಿಕಾರಿಯಾಗಿ ಕ್ರಮಕೈಗೊಳ್ಳದ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಶ್ರೀ ಸಿ.ಎಂ. ಈಶ್ವರ್, ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 3-1-2001ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತರು ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 14-6-2001ರ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಎಸ್ಇಎನ್ 93, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ.ಎಂ. ಈಶ್ವರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿಯವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಶ್ರೀ ಆರ್.ಆರ್. ಅಗ್ನಿಹೋತ್ರಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ 5,000-00 ರೂ.ಗಳ ಗೌರವ ಧನ ನೀಡಲಾಗುವುದು ಹಾಗೂ ಸರ್ಕಾರದ ಆದೇಶದ ಕ್ರಮಾಂಕ: ಸಿಆಸುಇ 45 ಸೇಇವಿ 2001, ದಿನಾಂಕ: 4-3-2002ರಲ್ಲಿ ನಿಗದಿಪಡಿಸಿದಂತೆ ಅವರು ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಚಾಮರಾಜನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ : ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು. ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1191

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).